

ಪಕ್ಷಿನೋಟದಲ್ಲಿ

# ಮಹಿಳೆ ಮತ್ತು ಕಾನೂನು

- ಶಶಿಕಲಾ ಉರಣ್ಕರ್

# ಮಹಿಳೆ ಮತ್ತು ಕಾನೂನು



ಶಶಿಕಲಾ ಉರಣ್ಕರ್ ಎಂ.ಎ., ಎಲ್. ಎಲ್. ಬಿ.

ನ್ಯಾಯವಾದಿ

ದಿನಾಂಕ: 8.3.1993

ನರಸಿಂಹರಾಜಪುರ

ಮೊದಲ ಮುದ್ರಣ 3.8.1992

ಬೆಲೆ ರೂ. 15.00 ಮಾತ್ರ






ಲೇಖಕಿ: ಶಶಿಕಲಾ ಉರಣ್ಕರ್ ಎಂ.ಎ., ಎಲ್. ಎಲ್. ಬಿ.
ನ್ಯಾಯವಾದಿ
'ಸ್ಪಂದನ'
ನರಸಿಂಹರಾಜಪುರ – 577 134
ಚಿಕ್ಕಮಗಳೂರು ಜಿಲ್ಲೆ




ಮುದ್ರಣ: ಸುಧೀನ್ ಆಫ್‌ಸೆಟ್
ಬನ್ನೇರುಗಟ್ಟ ರಸ್ತೆ
ಬೆಂಗಳೂರು - 560 029
ಫೋನ್ : 643475





## ಅರ್ಪಣೆ

ನನ್ನ ನೊಂದ ಸಹೋದರಿಗೆ

—ಶಶಿಕಲಾ

# ಪುಟ ತೆರೆವ ಮುನ್ನ ..........

ನಮ್ಮ ಈ ಪುರುಷಷಾಹೀ ವ್ಯವಸ್ಥೆಯಲ್ಲಿ ಮಹಿಳೆಯ ಅಸ್ತಿತ್ವವನ್ನು ಕೇವಲವಾಗಿಸಿ, ಕಡೆಗಣಿಸಿದ್ದಲ್ಲದೇ ಆಕೆಯನ್ನು ಹಲವು ಬಗೆಯಲ್ಲಿ ಶೋಷಿಸಲಾಗಾತ್ತಿದೆ. ಈ ಹಿನ್ನೆಲೆಯಲ್ಲಿ ಶೋಷಿತ ಮಹಿಳೆಯರ ರಕ್ಷಣೆಗೆ ನಮ್ಮ ಸಂವಿಧಾನದ ಅಡಿಯಲ್ಲಿ ವಿಶೇಷ ಸವಲತ್ತುಗಳನ್ನು ನೀಡಿ, ಆ ದಿಸೆಯಲ್ಲಿ ಹಲವು ಕಾನೂನುಗಳನ್ನು ರೂಪಿಸಲಾಗಿದೆ.

ಯಾವುದೇ ಕಾನೂನು ಯಾವುದೇ ಭಾಷೆಯಲ್ಲಿದ್ದರೂ ಅದರದೇ ಭಾಷೆಯಲ್ಲಿ ಅರ್ಥೈಸಿಕೊಳ್ಳಲು ಕಾನೂನು ಬಲ್ಲಾತನ ಯಾ ಳ ಅಗತ್ಯವಿದೆ. ಹಾಗೆಯೇ ಇಂಗ್ಲೀಷಿನಲ್ಲಿ ರೂಪಿಸಲಾದ ನಮ್ಮ ಕಾನೂನುಗಳನ್ನು ಕನ್ನಡಕ್ಕೆ ಭಾಷಾಂತರಿಸಿದಾಗಲೂ ಜನಸಾಮಾನ್ಯರಿಗೆ
1 ಸಂಪೂರ್ಣವಾಗಿ ಅರಿಯಲು ಕಷ್ಟ ಸಾಧ್ಯವೇ ಸರಿ. ಈ ದೃಷ್ಟಿಯಲ್ಲಿ ನಮ್ಮ ಸಾಮಾನ್ಯ ಮಹಿಳೆಯರಿಗೆ, ಮುಖ್ಯವಾಗಿ 'ಸಾಕ್ಷರ ನಾರಿಗೆ' ಅರ್ಥಾತ್ ಕನ್ನಡ ಓದು ಬರಹ ಬಲ್ಲ ಮಹಿಳೆಗೆ, ಯಾವುದೇ ವಕೀಲರ ನೆರವಿಲ್ಲದೆ, ಮಹಿಳೆಗಿರುವ ಹಕ್ಕುಗಳು, ಸವಲತ್ತುಗಳು, ಅವುಗಳನ್ನು ಪಡೆಯುವ ಮಾರ್ಗಗಳು, ಸುಲಭವಾಗಿ ಸರಳ ಭಾಷೆಯಲ್ಲಿ ತಿಳಿಯಲಿ ಎಂಬುದೇ ಈ ಪುಸ್ತಕದ ಉದ್ದೇಶ. ನಮ್ಮ ಶೋಷಿತ ವರ್ಗದಲ್ಲಿ ನೊಂದು ಬಸವಳಿದ ನನ್ನ ಅಸಂಖ್ಯಾತ ಸಹೋದರಿಯರಿಗೆ ತಮ್ಮ ಬದುಕಿನ ಪ್ರತ್ಯಕ್ಷ ಪರೋಕ್ಷ ದಮನವನ್ನು ಪ್ರತಿಭಟಿಸುವ ಮೂಲ ತಿಳುವಳಿಕೆಯನ್ನು ಈ ಕೃತಿ ನೀಡಿದರೆ ಸಾಕೆಂಬುದೇ ನನ್ನ ಪ್ರಯತ್ನ.

ಈ ಪುಸ್ತಕ ಹೊರಬರಲು ಪ್ರೋತ್ಸಾಹ ನೀಡಿದ ಶ್ರೀ ಹೆಚ್. ಸಿ. ಚಿದಾನಂದ ಹೆಗ್ಗಾರ್; ಇದರ ಕುರಿತು ಸೂಕ್ತ ಸಲಹೆ ನೀಡಿದ ಮಾನ್ಯ ಎನ್.ಎಸ್. ಸಂಗೊಳ್ಳಿಯವರು, ಜಿಲ್ಲಾ ಮತ್ತು ಸೆಷನ್ಸ್

ನ್ಯಾಯಾಧೀಶರು, ಚಿಕ್ಕಮಗಳೂರು ಇವರಿಗೆ, ಅಂದವಾಗಿ ಮುದ್ರಿಸಿದ ಶ್ರೀಮತಿ ಸುಜಾತ ವಿಜಯ್ ಮತ್ತು ಆಕರ್ಷಕ ಚಿತ್ರಗಳನ್ನು ಬರೆದು ಪುಸ್ತಕಕ್ಕೆ ಮೆರಗು ನೀಡಿದ ಶ್ರೀ ನಾಗರಾಜ್ ಮತ್ತು ಗುಜ್ಜಾರ್‌ರಿಗೆ ನನ್ನ ಅನಂತ ಕೃತಜ್ಞತೆಗಳು.

ಓದುಗರುಗಳ ಸಲಹೆಗಳಿಗೆ ವಿನಯಪೂರ್ವಕ ಸ್ವಾಗತವಿದೆ.

| | |
|---|---|
| ನರಸಿಂಹರಾಜಪುರ | **ಶಶಿಕಲಾ ಉರಣ್ಕರ್** |
| ಅಂತರಾಷ್ಟ್ರೀಯ | ನ್ಯಾಯವಾದಿ |
| ಮಹಿಳಾ ದಿನ 8.3.1993 | ನರಸಿಂಹರಾಜಪುರ |

# ಪರಿವಿಡಿ

# ಗಿರಿಜೆ





ಸಾವಿತ್ರಮ್ಮ ಮತ್ತು ಗೌರಮ್ಮ ಇಬ್ಬರು ಗೆಳತಿಯರು. ಅಂದು ಗದ್ದೆಯಿಂದ ಬೇಗ ಬೇಗ ಮನೆಗೆ ಬರುತ್ತಿದ್ದರು. ಪ್ರತಿದಿನವೂ ಮನೆಯಲ್ಲಿ ಅಡಿಗೆ ಮಾಡಿ, ಮಕ್ಕಳು ಮತ್ತು ಮನೆಯವರಿಗೆ ಊಟ ಬಡಿಸಬೇಕು. ನಂತರ ಹೊಲಕ್ಕೆ ಹೋದ ತಮ್ಮ ಗಂಡಂದಿರಿಗೆ ರೊಟ್ಟಿ ಬುತ್ತಿ ತೆಗೆದುಕೊಂಡು ಹೋಗಬೇಕು. ಜೊತೆಗೆ ಗದ್ದೆಯಲ್ಲೂ ಕಳೆ ತೆಗೆಯಬೇಕು. ದನಗಳಿಗೆ ಹುಲ್ಲು ಕೊಯ್ದು ಸೌದೆ ತರಬೇಕು. ಈ ಯೋಚನೆಯಲ್ಲೆ ಹೆಜ್ಜೆಯನ್ನು ಬೇಗ ಬೇಗ ಹಾಕುತ್ತಿದ್ದರು. ಆದರೆ, ಆ ದಿನದ ಕತೆಯೇ ಬೇರೆಯಾಗಿತ್ತು. ಸಾವಿತ್ರವ್ವನ ಪಕ್ಕದ ಮನೆಯಲ್ಲಿ ಅನಾಹುತ ಆಗಿತ್ತು. ನಾಗವ್ವನ ಸೊಸೆ ಗಿರಿಜೆ, 'ಬಾವಿಗೆ ಹಾರಿ ಸತ್ತುಹೋಗಿದ್ದಾಳೆ' ಅಂತ ಸುದ್ದಿ ತಿಳಿದಿತ್ತು. ಇದನ್ನು ಕೇಳಿ ಗಿರಿಜಳ ಕಷ್ಟದ ದಿನಗಳನ್ನು ನೆನಸಿಕೊಂಡರು. ಈ ಆಘಾತದಲ್ಲಿಯೇ, ನೋವಿನಿಂದ ಹೆಜ್ಜೆಯನ್ನು ಬೇಗ ಬೇಗ ಹಾಕುತ್ತಿದ್ದರು.

ಗಿರಿಜೆ ಬಂಗಾರದಂತಹ ಹುಡುಗಿ. ಮದುವೆ ಆಗಿ ಎರಡು ವರ್ಷ ಕಳೆದಿತ್ತು ಅಷ್ಟೆ. ಕೈಯಲ್ಲಿ ಆರು ತಿಂಗಳ ಹೆಣ್ಣು ಕೂಸು ಇತ್ತು. ಇದನ್ನೂ ಬಿಟ್ಟು, ಬಾವಿಗೆ ಹಾರಿ ಸಾಯುವಂತಹ ಕಾರಣ ಏನು ಎಂದು ಎಲ್ಲರಿಗೂ ಗೊತ್ತಿತ್ತು!

ಮದುವೆಯಲ್ಲಿ ಆದ ಒಪ್ಪಂದದಂತೆ ಗಿರಿಜಳ ಅಪ್ಪ ವರನಿಗೆ ವರದಕ್ಷಿಣೆ ಬಾಕಿ ಕೊಡಬೇಕಿತ್ತು. ಹತ್ತು ಸಾವಿರ ನಗದು, ವಾಚು, ಬಂಗಾರದ ಉಂಗುರ, ಚೈನುಸರ ಮತ್ತು ಗಿರಿಜಳಿಗೆ ತಾಳಿ ಸರ, ಓಲೆ, ಜುಮಕಿ ಅಂತ ಒಟ್ಟು ಐದು ತೊಲ ಬಂಗಾರ ಕೊಡಬೇಕಿತ್ತು. ಸಣ್ಣ ರೈತನಾಗಿದ್ದ ಗಿರಿಜಳ ಅಪ್ಪನಿಗೆ ಇದು ಕಷ್ಟವಾಗಿತ್ತು. ಆದರೂ, ಮಗಳ ಮದುವೆ ಆದರೆ ಸಾಕೆಂಬ ಆಸೆ. ತನ್ನನ್ನು ಮಾರಿಕೊಂಡಾದರೂ ಈ ಒಪ್ಪಂದಕ್ಕೆ ಸಿದ್ಧನಿದ್ದ. ಆದರೆ ವಾಸ್ತವ ಕತೆಯೇ ಬೇರೆ ಇತ್ತು. ಅಲ್ಲಿ ಇಲ್ಲಿ ಸಾಲ ಮಾಡಿ ಕೈಗಡ ಪಡೆದು ಊಟಕ್ಕೆ ಇಟ್ಟಿದ್ದ ಭತ್ತವನ್ನೆಲ್ಲಾ ಮಾರಿದ. ನಾಲ್ಕು ತೊಲ ಬಂಗಾರ, ನಾಲ್ಕು ಸಾವಿರ ನಗದು ಕೊಟ್ಟು ಮದುವೆ ಮಾಡುವುದರಲ್ಲಿಯೆ ಸುಸ್ತಾಗಿದ್ದ. ಇನ್ನೂ 6 ಸಾವಿರ ನಗದು ಒಂದು ತೊಲ ಬಂಗಾರ ಬಾಕಿ ಉಳಿದಿತ್ತು.

5

ಇದೇ ಶುರುವಾಯ್ತು, ಗಿರಿಜೆಯ ದುರ್ಗತಿ. ಆಕೆಯ ಅತ್ತೆ, ಗಂಡ, ನಾದಿನಿ ಎಲ್ಲರೂ ಸೇರಿಕೊಂಡರು. ಒಂದಲ್ಲಾ ಒಂದು ರೀತಿಯಲ್ಲಿ ಕಿರುಕುಳಕೊಡಲು ಶುರುಮಾಡಿದರು. ಪ್ರತಿ ತುತ್ತನ್ನು ಗಿರಿಜೆ ಕಣ್ಣೀರಿನಲ್ಲಿ ಕಲೆಸಿ ತಿನ್ನಬೇಕಾಯ್ತು. ಎಲ್ಲಿಗಾದರೂ ಓಡಿ ಹೋಗೋಣ ಎಂದರೆ, ಮುಂದೆ ಹೊಟ್ಟೆ ಬಟ್ಟೆಯ ಗತಿ ಏನೆಂಬುದರ ಚಿಂತೆ. ಸಾಲದಕ್ಕೆ ಆಕೆ ಹೆತ್ತಿದ್ದು ಹೆಣ್ಣು ಮಗು. ಅತ್ತೆಯ ಕಣ್ಣನ್ನು ಇನ್ನೂ ಕೆಂಡವಾಗಿಸಿತ್ತು. ಸರಿಯಾದ ಬಾಣಂತನ ಕೂಡ ಇರಲಿಲ್ಲ. ಹಾಲುಣಿಸುವ ತಾಯಿಗೆ ಒಳ್ಳೆಯ ಆಹಾರವಿಲ್ಲ. ದಿನೇ ದಿನೇ ಸಣಕಲು ಕಡ್ಡಿ ಆಗತೊಡಗಿದಳು. ಇನ್ನು ಎಷ್ಟು ದಿನ ತಾನೇ ಈ ಹಿಂಸೆಯಲ್ಲಿ ಬದುಕಿಯಾಳು?

ಗಂಡನ ನಿತ್ಯದ ಹೊಡೆತ, ಅತ್ತೆಯ ಚುಚ್ಚು ಮಾತುಗಳು ನೆರೆಹೊರೆಯವರಿಗೆ ಕೇಳುತ್ತಿತ್ತು. ಆದರೂ ಅತ್ತೆಯ ಕೆಟ್ಟ ನಾಲಿಗೆಗೆ ಸಿಗಲು ಇಷ್ಟಪಡದೇ ಕೇವಲ ಮೂಕ ಪ್ರೇಕ್ಷಕರಾಗಿದ್ದರು. ಗೌರವ್ವ

ಮತ್ತು ಸಾವಿತ್ರವ್ವ ಏನೂ ಮಾಡಲು ತೋಚದೇ ಒಳಗೇ ಉರಿಯುವ ಬೆಂಕಿಯನ್ನು ಹತ್ತಿಕ್ಕುತ್ತಿದ್ದಾರೆ – ಅಸಹಾಯಕರಾಗಿ ನಿಂತಿದ್ದಾರೆ.

ಹಾಗಾದರೆ, ಗಿರಿಜಳಂತಹ ಹೆಣ್ಣಿನ ಬದುಕಿಗೆ ರಕ್ಷಣೆ ಇಲ್ಲವೆ?

– ಇದು ಆ ಹೆಣದ ಸುತ್ತ ನಿಂತ ಎಲ್ಲರ ಮೌನ
  ಕೇಳುತ್ತಿರುವ ಪ್ರಶ್ನೆ!
– ಸಾವಿತ್ರವ್ವ, ಗೌರವ್ವನಂತಹವರ ಅಸಹಾಯಕ
  ಕ್ರೋಧದ ಪ್ರಶ್ನೆ!
– ಗಿರಿಜಳ ತವರಿನವರ ನೋವಿನ ಪ್ರಶ್ನೆ!

ಈ ಎಲ್ಲ ಪ್ರಶ್ನೆಗಳು ನಿಮ್ಮಲ್ಲಿ ಹಲವು ಬಾರಿ ಎದ್ದಿರಬಹುದು. ಹಿಂಸೆಗೆ, ಶೋಷಣೆಗೆ, ಒಳಪಟ್ಟ ಮಹಿಳೆಯರಿಗೆ ಅಗತ್ಯವಾಗಿ ರಕ್ಷಣೆ ಬೇಕು. ಈ ರಕ್ಷಣೆಯನ್ನು ನಮ್ಮ ಸಮಾಜ ಕಾನೂನಿನ ಮೂಲಕ ನೀಡಿದೆ. ಆದರೆ ಈ ಸೌಲಭ್ಯಗಳ ಅರಿವು ನಮ್ಮಲ್ಲಿ ಎಷ್ಟು ಜನ ಮಹಿಳೆಯರಿಗೆ ತಿಳಿದಿದೆ? ಆದ್ದರಿಂದ ನಮ್ಮ ಸಮಾಜದಲ್ಲಿ ಮಹಿಳೆಗೆ ಇರುವ ಹಕ್ಕುಗಳನ್ನು ತಿಳಿದುಕೊಳ್ಳೋಣ.



-- O --

**“ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ”**

# 2. ನಮ್ಮ ಸಂವಿಧಾನ

ನಮ್ಮ ಸಂವಿಧಾನದಲ್ಲಿ 'ಕಾನೂನಿನ ಎದುರು ಎಲ್ಲರಿಗೂ ಸಮಾನತೆ' ಎಂಬ ಮೂಲಭೂತ ಹಕ್ಕು ನಮಗಿದೆ. ಇದರ ಆಧಾರದ ಮೇಲೆ ಕಾನೂನು ಭಾರತದಲ್ಲಿ ಯಾವುದೇ ವ್ಯಕ್ತಿಯನ್ನು, ಯಾವುದೇ ಧರ್ಮ, ಜನಾಂಗ, ಪಂಗಡ, ಲಿಂಗ ಮತ್ತು ಪ್ರಾಂತ್ಯದ ಬೇಧವಿಲ್ಲದೇ ಎಲ್ಲರಿಗೂ ಸಮಾನ ರಕ್ಷಣೆಯನ್ನು ನೀಡಿದೆ. ಇಲ್ಲಿ ಸ್ತ್ರೀ ಮತ್ತು ಪುರುಷ ಎಂಬ ಬೇಧ ಮಾಡುವುದು ಕಾನೂನಿಗೆ ವಿರೋಧವಾಗುತ್ತದೆ.[1]

ಆದರೆ ಸಮಾಜದಲ್ಲಿ ಶೋಷಿತ ವರ್ಗ ಎನಿಸಿಕೊಂಡ ಮಹಿಳೆಯರಿಗೆ ಅವರ ಏಳಿಗೆಗಾಗಿ ವಿಶೇಷ ಸವಲತ್ತುಗಳನ್ನು ರಾಜ್ಯ
7 ಸರ್ಕಾರಗಳು ಒದಗಿಸಬಹುದೆಂದೂ ಸಹಾ ನಮ್ಮ ಸಂವಿಧಾನವೇ ಹೇಳಿದೆ.[2]

ಇದರ ಅನ್ವಯ ನಮಗೆಲ್ಲ ಇರುವ ಮೂಲಭೂತ ಹಕ್ಕುಗಳೆಂದರೆ,

1. ಸಮಾನ ಅವಕಾಶ ಮತ್ತು ರಕ್ಷಣೆಯ ಹಕ್ಕು
2. ಸ್ವಾತಂತ್ರ್ಯದ ಹಕ್ಕು
3. ಶೋಷಣೆಯ ವಿರುದ್ಧದ ಹಕ್ಕು
4. ದುಡಿಮೆಯ ಸ್ವಾತಂತ್ರ್ಯದ ಹಕ್ಕು
5. ಶಿಕ್ಷಣ ಮತ್ತು ಸಾಂಸ್ಕೃತಿಕ ಹಕ್ಕು
6. ಸಂವಿಧಾನಾತ್ಮಕ ಪರಿಹಾರಗಳ ಹಕ್ಕು[3]

---

1 ಭಾರತೀಯ ಸಂವಿಧಾನ ಅನುಚ್ಛೇಧ 14 ಮತ್ತು 15

2 ಭಾರತೀಯ ಸಂವಿಧಾನ ಅನುಚ್ಛೇಧ 16

3 ಭಾರತೀಯ ಸಂವಿಧಾನ ಅನುಚ್ಛೇಧ 14 ರಿಂದ 35ರ ವರೆಗೆ

ಈ ಮೇಲ್ಕಂಡ ಎಲ್ಲಾ ಮೂಲಭೂತ ಹಕ್ಕುಗಳು ಮಹಿಳಾ ಮತ್ತು ಪುರುಷ ಇಬ್ಬರಿಗೂ ಯಾವುದೇ ಬೇಧವಿಲ್ಲದೆ ಅನ್ವಯಿಸುತ್ತದೆ.

ಈ ದೃಷ್ಟಿಯಲ್ಲಿ ಉದ್ಯೋಗಸ್ಥ ಮಹಿಳೆಗೆ ತನ್ನ ಉದ್ಯೋಗ ನಿಮಿತ್ತ ಗಂಡನಿಂದ ದೂರ ಉಳಿಯುವುದನ್ನು ಸಮರ್ಥಿಸಿ ಉದ್ಯೋಗವು ಮಹಿಳೆಯ ಮೂಲಭೂತ ಹಕ್ಕುಗಳಲ್ಲೊಂದಾಗಿದೆ. ಹಾಗೆಯೇ ಆಕೆಗೆ ವೈವಾಹಿಕ ಜೀವನವನ್ನು ನಡೆಸಲು ವಾಸದ ಮನೆಯನ್ನು ಆಯ್ಕೆ ಮಾಡುವ ಹಕ್ಕು ಇದೆ ಎಂದು ದೆಹಲಿ ಉಚ್ಚ ನ್ಯಾಯಾಲಯ ತೀರ್ಪು ನೀಡಿದೆ.[4]

ಹಾಗೆಯೇ ಪುರುಷನಂತೆ ಮಹಿಳೆಗೂ ಸಹ ಈ ಕೆಳಕಂಡ ಸ್ವಾತಂತ್ರಗಳು ಇವೆ.

1. ಮಾತನಾಡುವ ಮತ್ತು ಅಭಿವ್ಯಕ್ತಗೊಳಿಸುವ ಸ್ವಾತಂತ್ರ.
2. ಶಾಂತಿಯಿಂದ ಹಾಗೂ ನಿರಾಯಧರಾಗಿ ಸಭೆ ಸೇರುವ ಸ್ವಾತಂತ್ರ.
3. ಸಂಘ ಮತ್ತು ಸಂಸ್ಥೆಗಳನ್ನು ಸ್ಥಾಪಿಸುವ ಸ್ವಾತಂತ್ರ.
4. ಭಾರತದ ಗಡಿಯಲ್ಲಿ ಎಲ್ಲೆಡೆ ನಿರ್ಭೀತವಾಗಿ ಸಂಚರಿಸುವ ಹಕ್ಕು.
5. ಭಾರತದ ಗಡಿ ಒಳಗೆ ಯಾವ ಭಾಗದಲ್ಲಾದರೂ ವಾಸಿಸುವ ಮತ್ತು ನೆಲಸುವ ಸ್ವಾತಂತ್ರ.
6. ಯಾವುದೇ ವೃತ್ತಿ, ವ್ಯಾಪಾರ, ಅಥವಾ ವ್ಯವಹಾರವನ್ನು ನಡೆಸುವ ಸ್ವಾತಂತ್ರ.

ಆದರೆ ನಮ್ಮ ಸಂವಿಧಾನದ 44ನೇ ವಿಧಿಯು ಭಾರತದ ಸಂಪೂರ್ಣ ಪ್ರದೇಶದಲ್ಲಿ ಎಲ್ಲ ನಾಗರೀಕರಿಗೂ ಅನ್ವಯಿಸುವಂತೆ ಒಂದೇ ರೀತಿಯ ಸಿವಿಲ್ ಪ್ರಕ್ರಿಯ ಸಂಹಿತೆಯನ್ನು ರೂಪಿಸಬೇಕೆಂದು ನಿರ್ದೇಶಿಸಿದ್ದರೂ, ವಾಸ್ತವವಾಗಿ ನಮ್ಮ ಭಾರತದಲ್ಲಿ ಬೇರೆ ಬೇರೆ



4 ಎ.ಐ.ಆರ್. 1975 ದೆಹಲಿ ಪುಟ 296

ಧರ್ಮದ ಜನರು ತಮ್ಮ ಧರ್ಮಗಳ ಮೇಲೆ ಅವಲಂಬಿಸಿದ ವೈಯುಕ್ತಿಕ ಕಾನೂನುಗಳನ್ನು ಬಳಸುತ್ತಿದ್ದಾರೆ. ಇದರಿಂದ ನಮ್ಮ ದೇಶದ ಎಲ್ಲಾ ಮಹಿಳೆಯರಿಗೂ ಸಮಾನವಾದ ಬದುಕಿನ ಹಕ್ಕುಗಳು ವಾಸ್ತವವಾಗಿ ಲಭ್ಯವಾಗುತ್ತಿಲ್ಲ. ಅಂದರೆ ಬೇರೆ ಬೇರೆ ಧರ್ಮಗಳ ಮಹಿಳೆಯರ ಮದುವೆ, ವಿವಾಹ ಜೀವನ, ದತ್ತು ಪಡೆಯುವುದು ಹಾಗೂ ಅನುವಂಶಿಕ ಆಸ್ತಿಯಲ್ಲಿ ಪಾಲನ್ನು ಪಡೆಯುವುದು ಇತ್ಯಾದಿಗಳ ಬಗ್ಗೆ ವಿಭಿನ್ನವಾದ ಕಾಯ್ದೆಗಳು ಅನ್ವಯಿಸುವುದರಿಂದ ಇದು ನಮ್ಮ ಸಂವಿಧಾನದ ಮೂಲಭೂತ ತತ್ವಕ್ಕೆ ವಿರುದ್ಧವಾಗಿದೆ. ಈ ದಿಸೆಯಲ್ಲಿ ಎಲ್ಲಾ ಮಹಿಳೆಯರಿಗೂ ಒಂದೇ ಸಮನಾಗಿ ಅನ್ವಯಿಸುವ ಏಕರೂಪದ ಕಾನೂನಿನ ಅಗತ್ಯವಿದೆ.



-- O --

# 3. ವಿವಾಹ ನಿಯಮಗಳು

ಯಾವುದೇ ಧರ್ಮದ ಅಥವಾ ಜಾತಿಯ ಇಬ್ಬರು ವ್ಯಕ್ತಿಗಳು ಮದುವೆಯಾಗಬೇಕೆಂದು ಬಯಸಿದರೆ ಅವರು ವಿಶೇಷ ವಿವಾಹ ಕಾನೂನಿನ ಅನ್ವಯ ಮದುವೆ ಆಗಬಹುದು. ಇಲ್ಲಿ ಆಯಾ ಜಾತಿ ಅಥವಾ ಧರ್ಮದ ಅನ್ವಯ ಇರುವ ಮದುವೆಯ ಸಂಪ್ರದಾಯಗಳನ್ನು ಬಿಟ್ಟು ತಮ್ಮ ಮದುವೆಯನ್ನು ನೊಂದಾವಣಾ ಅಧಿಕಾರಿಯ ಎದುರು ನೊಂದಾಯಿಸಬಹುದು. ಇಂತಹ ಮದುವೆ ಆಗುವ ಮೊದಲು ಸಂಬಂಧಿಸಿದ ಅಧಿಕಾರಿಯ ಎದುರು ಮದುವೆ ಆಗುವ ಬಗ್ಗೆ ನೋಟೀಸು ಕೊಡುವ 30 ದಿನಗಳಿಗಿಂತ ಪೂರ್ವದಿಂದಲೂ ಆ ವ್ಯಕ್ತಿ ಆ ಜಿಲ್ಲೆಯಲ್ಲಿ ನೆಲೆಸಿರಬೇಕು. ಹಾಗೆಯೇ ಆ ನೋಟೀಸು ಕೊಟ್ಟ 30 ದಿನಗಳ ಅವಧಿ ಮುಗಿದ ನಂತರ
10 ಯಾವುದೇ ತಕರಾರು ಅಂತಹ ಮದುವೆಗೆ ಬರದಿದ್ದಲ್ಲಿ ಆ ಮದುವೆ ನಡೆಯುತ್ತದೆ. ಇಲ್ಲಿ ಮದುವೆ ಆಗುವ ಗಂಡಿಗೆ 21 ವರ್ಷ ತುಂಬಿರಬೇಕು. ಹಾಗೆಯೇ ಹೆಣ್ಣಿಗೆ 18 ವರ್ಷ ಮೀರಿರಬೇಕು.[1] ಇಲ್ಲವಾದಲ್ಲಿ ಅಂತಹ ಮದುವೆ ಕಾನೂನು ಬದ್ಧವಾಗುವುದಿಲ್ಲ.

– ಅದೇ ರೀತಿ ಅಂತಹ ಮದುವೆಗೆ ಮೊದಲು ಪತ್ನಿ ಅಥವಾ ಪತಿ ಇದ್ದಿದ್ದರೆ,

– ಸಂಬಂಧ ಬಾಹಿರ ಮದುವೆ ಆಗಿದ್ದರೆ,

– ಬಹುಪತ್ನಿತ್ವದ ಮದುವೆ ಆಗಿದ್ದರೆ,

– ಮದುವೆ ಸಮಯಕ್ಕೆ ಗಂಡ ಅಥವಾ ಹೆಂಡತಿ ಹುಚ್ಚರಿದ್ದರೆ, ಅಥವಾ ಮಾನಸಿಕ ಅಸ್ವಸ್ಥತೆಯಿಂದ ಬಳಲುತ್ತಿದ್ದರೆ, ಮೂರ್ಛೆ ರೋಗಿಯಾಗಿದ್ದರೆ,

---

1 ವಿಶೇಷ ವಿವಾಹ ಅಧಿನಿಯಮ 1954 ಕಲಂ 4

– ಮದುವೆಯ ಗಂಡು ನಪುಂಸಕನಾಗಿದ್ದರೆ, ಅಂತಹ ಮದುವೆಗಳು ಕಾನೂನು ಬದ್ಧವಲ್ಲ.

ಎರಡು ಬೇರೆ ಬೇರೆ ಜಾತಿಗಳಿಗೆ ಸೇರಿದ ಅಥವಾ ಬೇರೆ ಬೇರೆ ಧರ್ಮಗಳಿಗೆ ಸೇರಿದ ವ್ಯಕ್ತಿಗಳು ವಿವಾಹವಾದರೆ ಅದು ಅಂತರ್‌ಜಾತಿ ವಿವಾಹ ಆಗುತ್ತದೆ. ಹೀಗೆ ಅಂತರ್‌ಜಾತಿ ವಿವಾಹ ಆದ ಪ್ರತಿ ವ್ಯಕ್ತಿಯೂ ಒಂದು ಸಾವಿರ ರೂಪಾಯಿ ಪಡೆಯಲು ಅರ್ಹರಾಗುತ್ತಾರೆ. ಮತ್ತು ಇತರೇ ಸೌಲಭ್ಯಗಳು ದೊರೆಯುತ್ತವೆ.[1] ಇದೇ ರೀತಿ ಪರಿಶಿಷ್ಟ ಜಾತಿ ಅಥವಾ ಪಂಗಡದ ವಧು ಅಥವಾ ವರನನ್ನು ಇತರೇ ಮೇಲ್ಜಾತಿ (ಅಂತ ಹೇಳಿಕೊಳ್ಳುವ) ಗಂಡು ಅಥವಾ ಹೆಣ್ಣು ಮದುವೆ ಆದಲ್ಲಿ ಅಂತಹಾ ದಂಪತಿಗಳಿಗೆ ರೂ. 10,000 ಸಹಾಯ ಧನವು ಸರ್ಕಾರದ ವತಿಯಿಂದ ಲಭಿಸುತ್ತದೆ. ಹಾಗೂ ಇತರೇ ವಿಶೇಷ ಸವಲತ್ತುಗಳು ದೊರಕುತ್ತವೆ. ಇದು ಕೇವಲ ಹಣಕ್ಕಾಗಿ ಅಥವಾ ಸವಲತ್ತಿಗಾಗಿ ಮದುವೆ ಆಗುವುದಕ್ಕಿಂತ ಪ್ರೇಮಿಸಿ, ಜಾತಿಯ ಏಣಿ ಶ್ರೇಣಿ ವ್ಯವಸ್ಥೆಯಿಂದ ಹೊರಬಂದು
11 ವಿವಾಹ ಆದ ದಂಪತಿಗಳಿಗೆ ನೈತಿಕ ಬೆಂಬಲದೊಡನೆ ನೀಡುವ ಅಲ್ಪ ಆರ್ಥಿಕ ಸಹಕಾರ.

ಮದುವೆಯು ಇಬ್ಬರು ಹಿಂದೂ ವ್ಯಕ್ತಿಗಳ ನಡುವೆ ಅಂದರೆ ಹಿಂದೂ ವಯಸ್ಕ ಹೆಣ್ಣು ಮತ್ತು ಹಿಂದೂ ವಯಸ್ಕ ಗಂಡಿನ ನಡುವೆ ಹಿಂದೂ ಸಂಪ್ರದಾಯ ವಿಧಿಗಳ ರೀತಿ ನಡೆಯಬಹುದು. ಇಲ್ಲಿ ಸಪ್ತ ಪದಿ ಆಚರಣೆಯು ಮತ್ತು ಹೋಮಕುಂಡ ಶಾಸ್ತ್ರವೂ ಸೇರಿದೆ.[2]

ಇಲ್ಲಿ ಹಿಂದೂಗಳೆಂದರೆ ವೀರಶೈವರು, ಲಿಂಗಾಯತರು, ಬ್ರಾಹ್ಮಣ ಅಥವಾ ಪ್ರಾರ್ಥನಾ ಅಥವಾ ಆರ್ಯ ಸಮಾಜದ ಅನುಯಾಯಿಗಳು ಸೇರುತ್ತಾರೆ.

ಹಾಗೆಯೇ ಬೌದ್ಧರು, ಜೈನರು, ಸಿಖ್ಖರು ಸಹ ಇದೇ ಕಾನೂನಿನಡಿ ಸೇರುತ್ತಾರೆ.[3]

---

1 ಕರ್ನಾಟಕ ವಿವಾಹಗಳ (ನೊಂದಾವಣಿ ಮತ್ತು ಇತರೆ) ಅಧಿನಿಯಮ 1976 ಕಲಂ 14

2 ಹಿಂದೂ ವಿವಾಹ ಅಧಿನಿಯಮ 1955 ಕಲಂ 7

3 ಹಿಂದೂ ವಿವಾಹ ಅಧಿನಿಯಮ 1955 ಕಲಂ 2

ಈ ಕಾನೂನಿನ ಅಡಿಯಲ್ಲಿ ಪತಿ ಅಥವಾ ಪತ್ನಿಯು ನ್ಯಾಯಾಲಯದಲ್ಲಿ ತನ್ನ ಪತ್ನಿ ಅಥವಾ ಪತಿಯು ಸಕಾರಣ ಇಲ್ಲದೆ ಅವರನ್ನು ತ್ಯಜಿಸಿದ್ದರೆ ತಮ್ಮ ದಾಂಪತ್ಯ ಜೀವನವನ್ನು ಪುನರ್ ಪ್ರಾರಂಭಿಸಲು ನ್ಯಾಯ ಕೋರಿ ಅರ್ಜಿ ಸಲ್ಲಿಸಬಹುದು,[1] ಹಾಗೆಯೇ ಪತಿ ಅಥವಾ ಪತ್ನಿಯು ವ್ಯಭಿಚಾರಿ ಆಗಿದ್ದರೆ ಅಥವಾ ಮನೋವೈಕಲ್ಪಕ್ಕೆ ಬಲಿಯಾಗಿದ್ದರೆ, ಅಥವಾ ಗುಹ್ಯರೋಗದಿಂದ ಬಳಲುತ್ತಿದ್ದರೆ, ಕುಷ್ಠರೋಗಿ ಆಗಿದ್ದರೆ, ಅಥವಾ ಎರಡು ವರ್ಷಕ್ಕಿಂತ ಹೆಚ್ಚು ಸಮಯಕ್ಕಿಂತ ಪತಿ ಅಥವಾ ಪತ್ನಿಯನ್ನು ತ್ಯಜಿಸಿದ್ದರೆ ಅಥವಾ ಗಂಡ ಅಥವಾ ಹೆಂಡತಿಯು 7 ವರ್ಷಕ್ಕಿಂತ ಹೆಚ್ಚು ಸಮಯ ಕಾರಾಗೃಹವಾಸವನ್ನು ಅನುಭವಿಸಿದ್ದರೆ ಅಥವಾ 7 ವರ್ಷಗಳಿಗಿಂತ ಅಧಿಕವಾಗಿ ಪತಿ ಅಥವಾ ಪತ್ನಿಯು ಬದುಕಿದ್ದಾರೋ, ಸತ್ತಿದ್ದಾರೋ ಎಂಬ ಸಂಗತಿ ತಿಳಿಯದೆ ಇದ್ದರೆ ಆಗ ದಾಂಪತ್ಯ ಜೀವನದಿಂದ ಬಿಡುಗಡೆಗಾಗಿ ಅರ್ಜಿ ಸಲ್ಲಿಸಬಹುದು. ಅದೇ ರೀತಿಯ ದಾಂಪತ್ಯ ಜೀವನ ಪುನರ್ ಸ್ಥಾಪಿಸಲು ನ್ಯಾಯಾಲಯದ ತೀರ್ಪು ನೀಡಿದ್ದೂ ಸಹ ಅಂತಹ ತೀರ್ಪನ್ನು ಮಾನ್ಯ ಮಾಡದೆ ಇದ್ದಲ್ಲಿಯೂ ಸಹ ಬಿಡುಗಡೆಗಾಗಿ ಅರ್ಜಿ ಸಲ್ಲಿಸಬಹುದು.[2] ಇಲ್ಲಿ ವಿವಾಹ ಬಿಡುಗಡೆ ಎಂದರೆ ವಿವಾಹ ವಿಚ್ಛೇಧನ. ಈ ಮೇಲೆ ಹೇಳಿದ ಕಾರಣಗಳ ಜೊತೆಗೆ ಮಹಿಳೆಯು ವಿವಾಹ ವಿಚ್ಛೇದನಕ್ಕೆ ಈ ಕೆಳಕಂಡ ಕಾರಣಗಳಿಗೂ ಸಹ ಅರ್ಜಿ ಸಲ್ಲಿಸಬಹುದು.



– ಅವಳ ಗಂಡನ ಮೇಲೆ ಅತ್ಯಾಚಾರದ ಆರೋಪ ಇದ್ದರೆ,

– ಗಂಡನು, ಅನೈಸರ್ಗಿಕ ಅಥವಾ ಅಸಹಜ ಕಾಮುಕನಾಗಿದ್ದರೆ,

ಜೀವನಾಂಶದ ಹಣವನ್ನು ನೀಡಬೇಕೆಂದು ಆಜ್ಞೆ ಆಗಿ 1 ವರ್ಷ ಕಳೆದಿದ್ದರೂ ದಂಪತಿಗಳಿಬ್ಬರೂ ಬೇರೆ ಬೇರೆ ಜೀವಿಸುತ್ತಿದ್ದರೆ, ವಿಚ್ಛೇದನ ಪಡೆಯಬಹುದಾಗಿದೆ.

---

1. ಹಿಂದು ವಿವಾಹ ಅಧಿನಿಯಮ, 55 -, ಕಲಂ 9
2. ಹಿಂದು ವಿವಾಹ ಅಧಿನಿಯಮ, 55 -, ಕಲಂ 13

ಇಲ್ಲಿ ಮಹಿಳೆಗೆ ಸ್ವಂತ ಆದಾಯ ಇಲ್ಲವೆಂದು ಮತ್ತು ಆಕೆಗೆ ಇಂತಹ ಪ್ರಕರಣಗಳಿಗೆ ತಗಲುವ ವೆಚ್ಚವನ್ನು ಭರಿಸುವ ಸಾಮರ್ಥ್ಯ ಇಲ್ಲವೆಂದು ಅವಳು ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿದಲ್ಲಿ ನ್ಯಾಯಾಲಯವು ಎದುರುದಾರನಿಗೆ ಅಂದರೆ ಗಂಡನಿಗೆ ಅವಳಿಗೆ ತಗಲುವ ಖರ್ಚಿನ ಹಣವನ್ನು ನೀಡಲು ಆದೇಶ ನೀಡಬಹುದಾಗಿದೆ.

ಇದು ವಿವಾಹದ ಚೌಕಟ್ಟಿನೊಳಗೆ ಧರ್ಮ, ಜಾತಿ, ವ್ಯವಸ್ಥೆ, ಸಮಾಜ, ಇತ್ಯಾದಿಗಳ ಕಲ್ಪನೆಯಲ್ಲಿ ವ್ಯಕ್ತಿಗತ ಬದುಕನ್ನು ನಾಶ ಮಾಡಿಕೊಳ್ಳುವುದಾಗಲಿ ಅಥವಾ ಕ್ರೂರ ಅಥವಾ ನಿಷ್ಪ್ರಯೋಜಕ ಅಥವಾ ದುರ್ಬಲ ಗಂಡನೊಡನೆ ಜೀವನವನ್ನು ಹಾಳುಮಾಡಿಕೊಳ್ಳುವ ಬದಲು ವಿವಾಹ ವಿಚ್ಛೇದನ ಪಡೆದು ಹೊಸ ಬದುಕನ್ನು ರೂಪಿಸಿಕೊಳ್ಳಲು ಕಾನೂನು ಸಹಕರಿಸುತ್ತದೆ.

ಹಾಗೆಯೇ ಹಿಂದೂ ವಿಧವೆಯ ಮರು ಮದುವೆಯೂ ಸಹ ಕಾನೂನಬದ್ಧ ಮದುವೆ ಆಗುತ್ತದೆ. ಹಾಗೆ ಮದುವೆ ಆದ ನಂತರ ಹುಟ್ಟಿದ ಮಕ್ಕಳು ಕಾನೂನುಬದ್ಧ ಸಂತಾನವಾಗುತ್ತದೆ.[1]



ಈ ವಿವಾಹ ಮತ್ತು ಕುಟುಂಬ ಸಂಬಂಧಿತ ತೊಂದರೆಗಳನ್ನು ಸರಳವಾಗಿ, ಶೀಘ್ರವಾಗಿ ಬಗೆಹರಿಸಬೇಕೆಂದು ವಿಶೇಷ ನ್ಯಾಯಾಲಯವಾಗಿ ಕುಟುಂಬ ನ್ಯಾಯಾಲಯಗಳನ್ನು ಸ್ಥಾಪಿಸಿರುತ್ತಾರೆ.[2]

## ವಿಚ್ಛೇದಿತ ಮಹಿಳೆ

ವಿವಾಹ ಬಂಧನದಿಂದ ವಿಚ್ಛೇದನ ಪಡೆದ ಮಹಿಳೆಯರ ಕುರಿತಾಗಿ ಹೇಳುವುದಾದರೆ

1. ಆಕೆ ವಿವಾಹ ವಿಚ್ಛೇದನ ಪಡೆದ ನಂತರ ಪುನರ್‌ವಿವಾಹ ಮಾಡಿಕೊಳ್ಳಬಹುದು. ಹಾಗೂ ಈ ಮರು ಮದುವೆಯು ವಿಚ್ಛೇದನಗೊಂಡ ಒಂದು ವರ್ಷದೊಳಗೇ ಮಾಡಿಕೊಳ್ಳಬಹುದು.[3] ಆದರೆ ವಿಚ್ಛೇದನದ ತೀರ್ಪು ಬಂದ ನಂತರ ಅಪೀಲು ಅವಧಿ

---

1 ಹಿಂದೂ ವಿಧವಾ ಪುನರ್ ವಿವಾಹ ಅಧಿನಿಯಮ ಕಲಂ 1
2 ಕೌಟುಂಬಿಕ ನ್ಯಾಯಾಲಯಗಳ ಅಧಿನಿಯಮ 1984
3 ಹಿಂದೂ ವಿವಾಹ ಅಧಿನಿಯಮ 1955 ಕಲಂ 15 ಮತ್ತು ವಿಶೇಷ ವಿವಾಹ ಅಧಿನಿಯಮ ಕಲಂ 30

ಮುಗಿದಿರಬೇಕು, ಅಥವಾ ಹಾಗೆ ಅಪೀಲು ಹೋಗಿದ್ದಲ್ಲಿ ಅದು ವಜಾ ಆಗಿರಬೇಕು.[1]

2. ವಿವಾಹ ವಿಚ್ಛೇದನ ಪಡೆದ ಮಹಿಳೆಗೆ ತನ್ನ ಗಂಡನಿಂದ ಜೀವನಾಂಶ ಪಡೆಯುವ ಹಕ್ಕು ಇರುತ್ತದೆ. ಆದರೆ ಇದು ಮರು ಮದುವೆ ಆಗುವ ವರೆಗೆ ಮಾತ್ರ.

3. ನಮ್ಮ ದೇಶದ ಸಾಮಾಜಿಕ ಮೌಲ್ಯಗಳ ಸಂಸ್ಕೃತಿಯ ಹಿನ್ನೆಲೆಯಲ್ಲಿ ಈ ಹಿಂದೂ ವಿವಾಹಕ್ಕೆ ಸಂಬಂಧಿಸಿದಂತೆ ನ್ಯಾಯಾಲಯದ ಯಾವುದೇ ನಡವಳಿಕೆಯನ್ನು ತೆರೆದ ನ್ಯಾಯಾಲಯದಲ್ಲಿ ಮಾಡುವುದಿಲ್ಲ.[2] ಅಂದರೆ ಸಾರ್ವಜನಿಕರಿಗೆ ಇಂತಹ ಕೇಸುಗಳ ವಿಚಾರಣೆ ಇತ್ಯಾದಿಗಳು ತಿಳಿಯಬಾರದೆಂದು, ಮಹಿಳೆಗೆ ತನ್ನ ಸಾಂಸಾರಿಕ ಜೀವನದ ಎಲ್ಲಾ ಮುಖಗಳು ಇತರರಿಗೆ ತಿಳಿದು ಸಂಕೋಚವಾಗದಿರಲೆಂದು ಗುಪ್ತ ವಿಚಾರಣೆಗೆ ಅವಕಾಶವಿದೆ. ಹಾಗೆಯೇ ಈ ಗುಪ್ತ ವಿಚಾರಣೆಯಲ್ಲಿನ ಯಾವುದೇ ಸಂಗತಿಯನ್ನು ಯಾರೇ ಆಗಲಿ ಮುದ್ರಿಸಿ ಪ್ರಚಾರಪಡಿಸಿದಲ್ಲಿ ಅವರು 1,000 ರೂ. ವರೆಗೆ ದಂಡ ವಿಧಿಸಬಹುದಾದ ಅಪರಾಧಿ ಆಗುತ್ತಾರೆ.[3]



-0-

---

1 ಕರ್ನಾಟಕ ವಿವಾಹ ಕಾನೂನುಗಳ (ತಿದ್ದುಪಡಿ) ಅಧಿನಿಯಮ 1976

2 ಹಿಂದೂ ವಿವಾಹ ಅಧಿನಿಯಮ ಕಲಂ 22

3 ಹಿಂದೂ ವಿವಾಹ ಅಧಿನಿಯಮ ಕಲಂ 22 (2)

# 4. ವರದಕ್ಷಿಣೆ





**ವರದಕ್ಷಿಣೆ ಎಂದರೇನು?**

ಒಂದು ಮದುವೆಗಾಗಿ, ಆ ಮದುವೆಯ ಮೊದಲು ಅಥವಾ ಮದುವೆಯ ಸಮಯದಲ್ಲಿ ಅಥವಾ ಮದುವೆಯ ನಂತರ ಕೊಡುವ ಯಾವುದೇ ರೀತಿಯ, ಸೊತ್ತು ವರದಕ್ಷಿಣೆ ಆಗುತ್ತದೆ. ಇಲ್ಲಿ ಒಂದು ಮದುವೆಯಲ್ಲಿ ಒಂದು ಪಕ್ಷದವರಿಂದ ಇನ್ನೊಂದು ಪಕ್ಷದವರಿಗೆ (ಉದಾಹರಣೆಗೆ ಹೆಣ್ಣಿನ ಕಡೆಯಿಂದ ಗಂಡಿನ ಕಡೆಯುವರಿಗೆ) ಕೊಡಲು ಒಪ್ಪಿಕೊಂಡ ಬೆಲೆಬಾಳುವ ಯಾವುದೇ ಸಂಪತ್ತು ವರದಕ್ಷಿಣೆ ಆಗುತ್ತದೆ. ಇದು ಹಣವಾಗಿರಬಹುದು. ಆಸ್ತಿಯಾಗಿರಬಹುದು. ಬೆಲೆ ಬಾಳುವ ವಸ್ತುವಾಗಿರಬಹುದು. ಆದರೆ

ಮುಸ್ಲಿಂ ಮತದವರ ಮದುವೆಯಲ್ಲಿ ಕೊಡುವ 'ಮಹರ್' ವರದಕ್ಷಿಣೆ ಆಗುವುದಿಲ್ಲ.[1] ಅಂತು ಮದುವೆಯಂತಹ ಪವಿತ್ರ, ಹಾಗೂ ಮಧುರ ಸಂಬಂಧದಲ್ಲಿ ವ್ಯಾಪಾರದಂತೆ ಪ್ರತಿಫಲವಾಗಿ ಯಾವುದೇ ಸಂಪತ್ತನ್ನು ನೀಡಿದರೂ ಅದು ಅಪರಾಧ ಆಗುತ್ತದೆ. ಹಾಗೆಯೇ ಮದುವೆ ಆಗಿ ಎಷ್ಟೋ ಸಮಯದ ನಂತರವು ಸಹಾ ವರದಕ್ಷಿಣೆ ಕೇಳಿದರೆ, ಕೊಟ್ಟರೆ, ಪಡೆದರೆ ಅದೂ ಅಪರಾಧ.

**ಶಿಕ್ಷೆ:**

ಯಾರೇ ಆಗಲೀ, ವರದಕ್ಷಿಣೆ ಕೊಟ್ಟರೆ ಅಥವಾ ತೆಗೆದುಕೊಂಡರೆ ಕಾನೂನಿನ ಪ್ರಕಾರ ತಪ್ಪಾಗುತ್ತದೆ. ವರದಕ್ಷಿಣೆ ನೀಡಲು ಅಥವಾ ಪಡೆಯಲು ಪ್ರಚೋದಿಸಿದರೆ ಅದೂ ಕೂಡ ತಪ್ಪು.[2] ಅಂತಹವರಿಗೆ 5 ವರ್ಷಕ್ಕಿಂತಲೂ ಕಡಿಮೆ ಇಲ್ಲದಂತೆ ಜೈಲು ಶಿಕ್ಷೆ ವಿಧಿಸಬಹುದು. ಮತ್ತು ವರದಕ್ಷಿಣೆ ಪಡೆದ ಮೊತ್ತ ಅಥವಾ 15 ಸಾವಿರ ರೂಪಾಯಿ ಇವೆರಡರಲ್ಲಿ ಯಾವುದು ಹೆಚ್ಚೋ ಅಷ್ಟು ಹಣವನ್ನು ದಂಡವಾಗಿ ವಿಧಿಸಬಹುದು.

16 ಹಾಗದರೆ, ಮದುವೆಯಲ್ಲಿ ನೀಡುವ ಉಡುಗೊರೆ ವರದಕ್ಷಿಣೆಯೇ?

ಅಲ್ಲ. ಯಾವುದೇ ಮದುವೆಯಲ್ಲಿ ವಧುವಿಗೆ ಅಥವಾ ವರನಿಗೆ ಉಡುಗೊರೆ ನೀಡಬಹುದು. ಆದರೆ ಇವುಗಳನ್ನು ಕೇಳಿ ಪಡೆದಿರಬಾರದು. ಮತ್ತು ಹಾಗೆ ನೀಡಿದ ಉಡುಗೊರೆಗಳನ್ನು ಒಂದು ಪಟ್ಟಿ ಮಾಡಿರಬೇಕು. ಜೊತೆಗೆ ವಧುವಿನ ಪರವಾಗಿ ಅಥವಾ ಆಕೆಗೆ ಸಂಬಂಧಿಸಿದವರಿಂದ ಉಡುಗೊರೆ ನೀಡಿದ್ದರೆ, ಅದು ಅವರ ಹಣಕಾಸಿನ ಅಂತಸ್ತಿಗೆ ಮೀರಿರಬಾರದು.[3]

---

1 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 2
2 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 3 ಮತ್ತು 4
3 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 2

## ಬರೀ ವರದಕ್ಷಿಣೆ ಕೇಳಿದ್ದರೆ?

ವಧು ಅಥವಾ ವರನ ಅಥವಾ ಅವರ ಬಂಧುಗಳಿಂದ ನೇರವಾಗಿ ಅಥವಾ ಪರೋಕ್ಷವಾಗಿ ವರದಕ್ಷಿಣೆ ಕೇಳಬಾರದು. ಹಾಗೇ ಕೇಳಿದರೆ, ಅಂತಹವರಿಗೆ 6 ತಿಂಗಳಿಗೆ ಕಡಿಮೆಯಿಲ್ಲದಂತೆ ಜೈಲು ಶಿಕ್ಷೆ ವಿಧಿಸಬಹುದು. ಜೊತೆಗೆ 2 ವರ್ಷಗಳ ವರೆಗೆ ಈ ಶಿಕ್ಷೆ ಮುಂದುವರಿಯಬಹುದು. ಮತ್ತು 10 ಸಾವಿರ ರೂಪಾಯಿ ದಂಡವನ್ನೂ ವಿಧಿಸಬಹುದು.

## ಮದುವೆಗೆ ಜಾಹಿರಾತು ನೀಡಿದರೆ?

ಯಾವುದೇ ಪತ್ರಿಕೆ ಅಥವಾ ಮಾಧ್ಯಮಗಳ ಮೂಲಕ ಜಾಹಿರಾತು ನೀಡಿ ಒಬ್ಬ ವಧು ಅಥವಾ ವರನನ್ನು ಮದುವೆಯಾದರೆ ತನ್ನ ಆಸ್ತಿಯಲ್ಲಿ ಅಥವಾ ಹಣದಲ್ಲಿ ಪಾಲನ್ನು ಅಥವಾ ವ್ಯವಹಾರದಲ್ಲಿ ಹಿಸ್ಸೆಯನ್ನು ಕೊಡುವುದಾಗಿ ಹೇಳಿದರೆ ತಪ್ಪಾಗುತ್ತದೆ. ಇಂತಹವರಿಗೆ 6 ತಿಂಗಳಿಗೆ ಕಡಿಮೆಯಿಲ್ಲದಂತೆ 5 ವರ್ಷಗಳವರೆಗೆ ಜೈಲು ಶಿಕ್ಷೆ ವಿಧಿಸಬಹುದು. ಮತ್ತು 15 ಸಾವಿರ
17 ರೂಪಾಯಿ ದಂಡವನ್ನೂ ವಿಧಿಸಬಹುದು. ಹೀಗೆ ವರದಕ್ಷಿಣೆ ಕೊಡುವುದು, ತೆಗೆದುಕೊಳ್ಳುವುದು ಮತ್ತು ಕೇಳುವುದು ಕಾನೂನು ಬಾಹಿರವಾಗಿದೆ.[4]

## ಒಂದು ವೇಳೆ ವರದಕ್ಷಿಣೆ ಪಡೆದಾಗಿದ್ದರೆ?

ಇಲ್ಲಿ ಮೊದಲು ವರದಕ್ಷಿಣೆ ಪಡೆದದ್ದು ಅಪರಾಧ. ನಂತರ ವರದಕ್ಷಿಣೆಯನ್ನು ಯಾವ ವಧುವಿನ ಪರವಾಗಿ ಪಡೆದಿರುತ್ತಾರೋ, ಆ ವಧುವಿಗೆ ಹಿಂತಿರುಗಿಸಬೇಕು.

## ಎಷ್ಟು ಸಮಯದೊಳಗೆ ಹಿಂತಿರುಗಿಸಬೇಕು?

ಮದುವೆಗೆ ಮೊದಲು ಪಡೆದಿದ್ದರೆ, ಅದನ್ನು ಮದುವೆಯ ದಿನಾಂಕದಿಂದ 3 ತಿಂಗಳ ಒಳಗೆ ಹಿಂತಿರುಗಿಸಬೇಕು. ಮದುವೆ ಆದ ನಂತರ ಅಥವಾ ಮದುವೆಯಲ್ಲಿ ಪಡೆದಿದ್ದರೆ ಅಲ್ಲಿಂದ 3 ತಿಂಗಳ

---

4 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 4-ಎ

ಒಳಗೆ ಹಿಂತಿರುಗಿಸಬೇಕು. ಒಂದು ವೇಳೆ, ವಧುವು ವಯಸ್ಸಿಗೆ ಬಾರದವಳು ಆಗಿದ್ದರೆ (ಅಪ್ರಾಪ್ತ ವಯಸ್ಕಳು) ಅವಳಿಗೆ 18 ವರ್ಷ ವಯಸ್ಸು ತುಂಬುವ ವರೆಗೆ ಕಾಯಬೇಕು. ಹಾಗೆ ಹಿಂತಿರುಗಿಸುವವರೆಗೆ, ಆಕೆಯ ಲಾಭಕ್ಕಾಗಿ ಒಬ್ಬ ನಂಬಿಕಸ್ತನಂತೆ ಆ ವರದಕ್ಷಿಣೆಯನ್ನು ಇಟ್ಟುಕೊಂಡಿರಬೇಕು. ಅಂದರೆ, ವರದಕ್ಷಿಣೆ ಸೊತ್ತನ್ನು ಯಾವುದೇ ನೆಪದಲ್ಲಿ ದುರುಪಯೋಗ ಮಾಡಿಕೊಳ್ಳಬಾರದು.[5]

ಒಂದು ವೇಳೆ, ಹಾಗೆ ಪಡೆದ ವರದಕ್ಷಿಣೆಯನ್ನು ಹಿಂತಿರುಗಿಸದೇ, ಇದ್ದರೆ, ಅದು ಅಪರಾಧ. ಅಂತಹವರಿಗೆ 6 ತಿಂಗಳಿಗೆ ಕಡಿಮೆಯಿಲ್ಲದಂತೆ 2 ವರ್ಷಗಳ ವರೆಗೆ ಶಿಕ್ಷೆ ವಿಧಿಸಬಹುದು.

ಹಾಗೆ, ವರದಕ್ಷಿಣೆಯನ್ನು ಹಿಂತಿರುಗಿ ಪಡೆಯಲು ಅರ್ಹಳಾದ ವಧುವು ಅದನ್ನು ಪಡೆಯುವ ಮೊದಲು ಸಾವಿಗೀಡಾಗಬಹುದು. ಆಗ ಆಕೆಯ ವಾರಸುದಾರರಿಗೆ ಇದನ್ನು ಹಿಂತಿರುಗಿಸಬೇಕು. ಆಕೆ ಮದುವೆಯಾದ 7 ವರ್ಷಗಳ ಒಳಗೆ ಅಸ್ವಾಭಾವಿಕ ಸಾವಿಗೆ ಈಡಾಗಿದ್ದರೆ, ಆಕೆಗೆ ಮಕ್ಕಳಿದ್ದರೆ, ಆ ಮಕ್ಕಳಿಗೆ ಹಿಂತಿರುಗಿಸಬೇಕು. ಹೀಗೆ ವರದಕ್ಷಿಣೆ ಪಡೆದು ಅಪರಾಧಿ ಎಂದು ತೀರ್ಮಾನ ಆಗಿದ್ದರೂ; ಆ ವಧುವಿಗೆ ಅಥವಾ ಸಂದರ್ಭಾನುಸಾರ ಆಕೆಯ ವಾರಸುದಾರರಿಗೆ ಅದನ್ನು ಹಿಂತಿರುಗಿಸದೇ ಇದ್ದರೆ, ಅದೂ ಅಪರಾಧವಾಗುತ್ತದೆ. ಅಂತಹವರಿಗೆ ಇಂತಿಷ್ಟು ಅವಧಿಯೊಳಗೆ ಅದನ್ನು ಹಿಂತಿರುಗಿಸಬೇಕು ಎಂದು ನ್ಯಾಯಾಲಯವು ಆದೇಶ ನೀಡುತ್ತದೆ. ಹಾಗೆ ನಿಗದಿಪಡಿಸಿದ ಅವಧಿಯ ಒಳಗೆ ಹಿಂತಿರುಗಿಸದೇ ಇದ್ದರೆ, ಆತನಿಗೆ ದಂಡದ ರೂಪದಲ್ಲಿ ವರದಕ್ಷಿಣೆಗೆ ಸಮಾನವಾದ ಮೊತ್ತವನ್ನು ವಸೂಲಿ ಮಾಡಲು, ನ್ಯಾಯಾಲಯ ಆದೇಶಿಸುತ್ತದೆ. ಮತ್ತು ಅಂತಹ ದಂಡದ ಹಣವನ್ನು ಸದರೀ ಮಹಿಳೆಗೆ ನೀಡುವಂತೆ ಸೂಚಿಸುತ್ತದೆ.



---

5 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 6

## ವರದಕ್ಷಿಣೆ ಅಪರಾಧವನ್ನು ಕೋರ್ಟಿಗೆ ಒಯ್ಯುವುದು ಹೇಗೆ?

1. ವರದಕ್ಷಿಣೆ ಕುರಿತ ಯಾವುದೇ ಅಪರಾಧವು ಸಂಬಂಧಿಸಿದ ನ್ಯಾಯಾಧೀಶರ ಸ್ವಂತ ತಿಳುವಳಿಕೆಗೆ ಬಂದಿರಬೇಕು. ಅಥವಾ

2. ಅಪರಾಧಕ್ಕೆ ಸಂಬಂಧಿಸಿದ ಕಾರಣಗಳನ್ನು ಒಳಗೊಂಡ ಪೋಲೀಸ್ ವರದಿಯ ಮೂಲಕ ಕೇಸು ಹಾಕಬಹುದು. ಅಥವಾ

3. ಅಂತಹ ಅಪರಾಧದಿಂದ ನೋವಿಗೀಡಾದ (ಭಾದಿತಳಾದ) ವ್ಯಕ್ತಿ ಅಥವಾ ಆವಳ ತಂದೆ-ತಾಯಿಗಳು ದೂರನ್ನು ನೀಡಬಹುದು. ಮತ್ತು ಅವಳ ಇತರೇ ಬಂಧುಗಳು ಅಥವಾ ಯಾವುದೇ ಮಾನ್ಯತೆ ಪಡೆದ ಕಲ್ಯಾಣ ಸಂಘ ಅಥವಾ ಸಂಸ್ಥೆ ದೂರನ್ನು ನೀಡಬಹುದು.[6] ನೇರವಾಗಿ ಅಂದರೆ, ವರದಕ್ಷಿಣೆ ಅಪರಾಧವನ್ನು ಪೋಲೀಸ್ ಅಧಿಕಾರಿಗೆ ದೂರಿನ ಮೂಲಕ ತಿಳಿಸಬೇಕು.

ಈ ವರದಕ್ಷಿಣೆಗೆ ಸಂಬಂಧಿಸಿದ ಅಪರಾಧಗಳು ಜಾಮೀನಿನ
 ಮೇಲೆ ಬಿಡಲು ಆಗದಂತಹವು. ಮತ್ತು ರಾಜೀ ಮಾಡಿಕೊಳ್ಳಲು ಆಗದಂತಹ ಅಪರಾಧ ಆಗಿರುತ್ತವೆ.

ಬೇರೆ ಸಾಮಾನ್ಯ ಕೇಸಿನಂತೆ, ಅಪರಾಧ ಮಾಡಿದ್ದಾನೆ ಎಂದು ಆರೋಪ ಹೊರಿಸಿದ ವ್ಯಕ್ತಿಯೇ ಅಪರಾಧವನ್ನು ಸಾಬೀತುಗೊಳಿಸುವ ಹೊಣೆ ಇಲ್ಲಿ ಇರುವುದಿಲ್ಲ. ಬದಲಾಗಿ ಅಪರಾಧ ಮಾಡಿದ್ದಾನೆ ಎಂದು ಆರೋಪ ಹೊರಿಸಿಕೊಂಡ ವ್ಯಕ್ತಿಯೇ 'ತಾನು ಅಪರಾಧ ಮಾಡಿಲ್ಲ' ಎಂದು ರುಜುವಾತುಗೊಳಿಸುವ ಹೊಣೆ ಹೊರಬೇಕಾಗುತ್ತದೆ.[7]

## ವರದಕ್ಷಿಣೆ ಸಾವು

ಇತ್ತೀಚೆಗೆ ವಿವಾಹಿತ ಮಹಿಳೆಯ ಅಸಹಜ ರೀತಿಯ ಸಾವುಗಳು ಅತೀ ಸಾಧಾರಣ ವಿಷಯ ಆಗುತ್ತಿವೆ. ವಿವಾಹವಾಗಿ

---

6 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 7

7 ವರದಕ್ಷಿಣೆ ನಿಷೇಧ ಕಾನೂನು 1961 - ಸೆಕ್ಷನ್ 8-ಎ

ಕೆಲವೇ ವರ್ಷಗಳಲ್ಲಿ ಅಸಹಜವಾಗಿ ಸಾಯುವ ಮಹಿಳೆಯರ ಸಂಖ್ಯೆ, ತದನಂತರದಲ್ಲಿ ಅಸಹಜ ಸಾವಿಗೆ ಬಲಿಯಾಗುವ ಮಹಿಳೆಯರಿಗಿಂತ ಅತೀ ಹೆಚ್ಚು.

ಅಸಹಜ ಸಾವು ಎಂದರೆ ಒಬ್ಬ ವಿವಾಹಿತ ಮಹಿಳೆಯು ಸುಟ್ಟಗಾಯ, ಹುಣ್ಣುಗಳಿಂದ ಅಥವಾ ದೇಹದ ಮೇಲೆ ಇತರೇ ಯಾವುದೇ ಬಗೆಯ ಅಘಾತಗಳಿಂದ ಸಾವು ಸಂಭವಿಸುವುದು, ಇವು ಸಾಮಾನ್ಯ ಸನ್ನಿವೇಶಗಳಲ್ಲಿ ಆಗುವಂತಹ ಗಾಯಗಳಲ್ಲ. ಇಂತಹ ಅಸಹಜ ಸಾವು, ಆ ಮಹಿಳೆ ಮದುವೆ ಆಗಿ 7 ವರ್ಷಗಳ ಒಳಗೆ ಸಂಭವಿಸಿರಬೇಕು. ಮತ್ತು ಅಂತಹ ಸಾವಿಗೆ ಮುನ್ನ ಸದರೀ ಮಹಿಳೆಯು ಆಕೆಯ ಗಂಡನಿಂದ ಅಥವಾ ಆತನ ಸಂಬಂಧಿಕರಿಂದ, ವರದಕ್ಷಿಣೆಗೆ ಸಂಬಂಧಿಸಿದಂತೆ ಹಿಂಸೆ, ಕಿರುಕುಳಕ್ಕೆ ಒಳಗಾಗಿದ್ದರೆ ಅದು ವರದಕ್ಷಿಣೆ ಸಾವು ಎಂದಾಗುತ್ತದೆ.[8]

ಇಂತಹ ವರದಕ್ಷಿಣೆ ಸಾವಿನ ಅಪರಾಧವನ್ನು ಒಬ್ಬ ವ್ಯಕ್ತಿ ಮಾಡಿದ್ದಾನೆಂದು, ನ್ಯಾಯಾಲಯವು, ಊಹೆ ಮಾಡತಕ್ಕದ್ದು. ಇಲ್ಲಿ ಅಂತಹ ಸಾವಿಗೆ ಮುನ್ನ ಆಕೆಗೆ ವರದಕ್ಷಿಣೆಗೆ ಸಂಬಂಧಿಸಿದಂತೆ ಆತನಿಂದ ಕಿರುಕುಳ, ಹಿಂಸೆ ನೀಡಲಾಗಿತ್ತೆಂದು ತೋರಿಸಬೇಕು.[9] ಇಲ್ಲಿಯೂ ಸಹ ಆರೋಪ ಹೊರಿಸಿಕೊಂಡ ವ್ಯಕ್ತಿಯೇ 'ತಾನು ಅಪರಾಧ ಮಾಡಿಲ್ಲ'ವೆಂದು ರುಜುವಾತುಗೊಳಿಸಬೇಕು. ಹಾಗೆಯೇ ವಿವಾಹಿತ ಮಹಿಳೆಯು ಆತ್ಮಹತ್ಯೆ ಮಾಡಿಕೊಂಡಿದ್ದರೆ ಅದು ಆಕೆಯ ಗಂಡ ಅಥವಾ ಆತನ ಸಂಬಂಧಿಕರ ಪ್ರೇರಣೆಯಿಂದ ಆದದ್ದು ಎಂದು ನ್ಯಾಯಾಲಯವು ಊಹೆ ಮಾಡಬಹುದಾಗಿದೆ.[10] ಇಲ್ಲಿ ಮದುವೆ ಆಗಿ 7 ವರ್ಷಗಳ ಒಳಗೆ ಆಕೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಮತ್ತು ಆಕೆಗೆ ಆಕೆಯ ಗಂಡ ಅಥವಾ ಆತನ ಸಂಬಂಧಿಕರು ಹಿಂಸೆ ನೀಡುತ್ತಿದ್ದರು ಎಂದು ತೋರಿಸಬೇಕು.



---

8 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 304-ಬಿ

9 ಭಾರತೀಯ ಸಾಕ್ಷ್ಯ ಅಧಿನಿಯಮ 1872 - ಸೆಕ್ಷನ್ 113-ಬಿ

10 ಭಾರತೀಯ ಸಾಕ್ಷ್ಯ ಅಧಿನಿಯಮ 1872 - ಸೆಕ್ಷನ್ 113-ಬಿ

# 5. ವಿವಾಹಕ್ಕೆ ಸಂಬಂಧಿಸಿದ ಅಪರಾಧಗಳು

ಯಾವ ಒಬ್ಬನು ಕಾನೂನುಬದ್ಧವಾಗಿ ಮದುವೆ ಆಗಿರದೇ, ಯಾವುದೇ ಮಹಿಳೆಯನ್ನು ಒಲಿಸುವಂತಿಲ್ಲ. ಆಕೆ ತನ್ನನ್ನು ಕಾನೂನುಬದ್ಧವಾಗಿ ಮದುವೆ ಆಗಿದ್ದಾಳೆಂದು ಮೋಸದಿಂದ ನಂಬಿಸುವಂತಿಲ್ಲ. ಹಾಗೆ ನಂಬಿಸಿ, ಆ ಮೂಲಕ ಆಕೆಯೊಡನೆ ಲೈಂಗಿಕ ಸಂಬಂಧ ಹೊಂದಿದರೆ ಅದು ಅಪರಾಧವಾಗುತ್ತದೆ. ಅಂತಹವನಿಗೆ 10 ವರ್ಷಗಳ ಕಾರಗೃಹ ಶಿಕ್ಷೆ ಮತ್ತು ದಂಡವನ್ನೂ ವಿಧಿಸಬಹುದಾಗಿದೆ.[1]

ಇದು ಮೊದಲು ಕಾನೂನುಬದ್ಧ ಹೆಂಡತಿ ಇದ್ದೂ, ಬೇರೆ
21 ಮದುವೆ ಆಗುವ ಗಂಡನಿಗೆ ಅನ್ವಯಿಸುತ್ತದೆ. ಇಲ್ಲಿ ಮೋಸದಿಂದ 2ನೇ ಮದುವೆ ಮಾಡಿಕೊಳ್ಳುವ ಗಂಡನು ಅಪರಾಧಿ ಆಗುತ್ತಾನೆ. ಹೆಂಡತಿ ಅಥವಾ ಗಂಡನು ಜೀವಂತ ಇರುವಾಗಲೇ ಮರು ಮದುವೆ ಮಾಡಿಕೊಳ್ಳುವುದು ಅಪರಾಧ. ಅಂತಹವರಿಗೆ 7 ವರ್ಷಗಳ ಶಿಕ್ಷೆ ಮತ್ತು ದಂಡವನ್ನೂ ವಿಧಿಸಬಹುದು.[2] ಹಾಗೆ ಮರುಮದುವೆ ಮಾಡಿಕೊಳ್ಳುವ ಕಾಲಕ್ಕೆ ಮೊದಲನೇ ಗಂಡ ಅಥವಾ ಹೆಂಡತಿಯು 7 ವರ್ಷ ನಾಪತ್ತೆಯಾಗಿದ್ದರೆ, ಅಂತಹವರು 2ನೇ ಮದುವೆ ಆಗಬಹುದು. ಮರುಮದುವೆ ಆಗುವ ವ್ಯಕ್ತಿಯಿಂದ ಮೊದಲನೇ ಮದುವೆ ಆದ ಸಂಗತಿಯನ್ನು ಮುಚ್ಚಿಡುವುದು ಅಪರಾಧ. ಅಂತಹವರಿಗೆ 10 ವರ್ಷಗಳವರೆಗಿನ ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾಗಿದೆ.[3]



1 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 493

2 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 494

3 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 495

ವಿವಾಹದ ಧಾರ್ಮಿಕ ಕಾರ್ಯಾಚರಣೆಯ ಮೂಲಕ ತಾನು ಕಾನೂನುಬದ್ಧ ಮದುವೆ ಆಗುತ್ತಿಲ್ಲ ಎಂದು ತಿಳಿದೂ ಸಹಾ, ದುರುದ್ದೇಶದಿಂದ ಅಥವಾ ವಂಚನೆಯಿಂದ ಮದುವೆ ಆಗಿರಬಹುದು. ಅಂತಹವರು 7ವರ್ಷಗಳ ವರೆಗಿನ ಕಾರಾಗೃಹ ಶಿಕ್ಷೆ ಮತ್ತು ದಂಡಕ್ಕೆ ಗುರಿಯಾಗುತ್ತಾರೆ.[4]

## ಪರಸತಿಗಮ್ನ (ಅನೈತಿಕ ಸಂಬಂಧ)

ಇನ್ನೊಬ್ಬನ ಪತ್ನಿಯೆಂದು ತಿಳಿದೂ ಸಹಾ, ಆತನ ಸಮ್ಮತಿ ಇಲ್ಲದೇ ಅಥವಾ ಪರೋಕ್ಷ ಒಪ್ಪಿಗೆ ಇಲ್ಲದೇ, ಆಕೆಯೊಡನೆ ಲೈಂಗಿಕ ಸಂಬಂಧ ಹೊಂದುವುದು ಅಪರಾಧ. ಅಂತಹವರಿಗೆ 5 ವರ್ಷವರೆಗಿನ ಜೈಲು ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದು.[5]

ಈ ಸಮಾಜದಲ್ಲಿ ಎಲ್ಲ ರೀತಿಯಿಂದ ಮಹಿಳೆಯನ್ನು ಶೋಷಿಸುವ ಸ್ಥಿತಿಯಿದೆ. ಆದ್ದರಿಂದ ಈ ರೀತಿ ಲೈಂಗಿಕ ಸಂಬಂಧ ಹೊಂದಿದಲ್ಲಿ ಪುರುಷನಿಗೆ ಮಾತ್ರ ಶಿಕ್ಷೆಯಿದೆ. ಆದರೆ ಅಂತಹ ಸಂಬಂಧದಲ್ಲಿ ಪಾಲ್ಗೊಂಡ ಮಹಿಳೆಯದು ಅಪರಾಧವಾಗುವುದಿಲ್ಲ. ಇನ್ನೊಬ್ಬನ ಪತ್ನಿ ಎಂದು ತಿಳಿದೂ ಸಹ ಆಕೆಯನ್ನು ಪುಸಲಾಯಿಸಿ ಕರೆದುಕೊಂಡು ಹೋಗುವಂತಿಲ್ಲ. ತನ್ನೊಡನೆ ಅನೈತಿಕ ಸಂಬಂಧ ಹೊಂದಬಹುದು ಎಂಬ ಉದ್ದೇಶದಿಂದ ಆಕೆಯನ್ನು ಕರೆದುಕೊಂಡು ಹೋಗಿದ್ದರೆ ಅದೂ ಸಹಾ 2 ವರ್ಷಗಳವರೆಗಿನ ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದಾದ ಅಪರಾಧವಾಗುತ್ತದೆ.[6]

-0-

4 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 496
5 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 497
6 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 498

# 6. ಗರ್ಭಪಾತ





ಇದು ಪುರುಷ ಪ್ರಧಾನ ಮೌಲ್ಯದ ಸಮಾಜ. ಹೆಣ್ಣು ಭ್ರೂಣವೇ ಅಪರಾಧಿ ಎನ್ನುವ ಮನೋಭಾವ ಸಾಮಾನ್ಯವಾಗಿದೆ. ಯಾವುದೇ ಅಂತಸ್ತು, ಲಿಂಗ, ಮತ, ಜಾತಿ, ಬೇಧವಿಲ್ಲದೆ ನಮ್ಮಲ್ಲಿ ಕ್ಯಾನ್ಸರ್‌ನಂತೆ ಹರಡಿದೆ. ಹೆಣ್ಣಿನ ಸಹಜ ಹಾಗೂ ಹೆಮ್ಮೆಯ ಅವಸ್ಥೆ ತಾಯಿತನ. ಇದನ್ನು ಕಸಿದುಕೊಳ್ಳುವವರನ್ನು ಕೇಳುವವರಿಲ್ಲವೇ........?

ಯಾರೇ ಆಗಲಿ, ಒಬ್ಬ ಮಹಿಳೆಯ ಆರೋಗ್ಯಕ್ಕೆ ಸಂಬಂಧಿಸಿದಂತೆ ಒಳ್ಳೆಯ ಕೆಲಸ ಮಾಡಬಹುದು. ಆಕೆಯ ಜೀವ ಉಳಿಸುವ ಸದುದ್ದೇಶದಿಂದ, ಮಾಡಿದ ಗರ್ಭಪಾತಗಳ ಹೊರತಾಗಿ, ಇತರೇ ಗರ್ಭಪಾತಗಳು ಅಪರಾಧವಾಗುತ್ತವೆ. ಈ ಅಪರಾಧಕ್ಕೆ 3

ವರ್ಷಗಳ ಕಾರಾಗೃಹ ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದು.[1] ಇಲ್ಲಿ ಹೆಣ್ಣು ಭ್ರೂಣವನ್ನು ಪತ್ತೆ ಹಚ್ಚಿ ಅದನ್ನು ಗರ್ಭಪಾತ ಮಾಡಿಸುವುದು ಮಹಾಪರಾಧ.

## ಗರ್ಭಪಾತ ಮಾಡುವಾಗ ಸಾವು ಸಂಭವಿಸಿದರೆ?

ಗರ್ಭಪಾತ ಉದ್ದೇಶದಿಂದ ಕೈಕೊಂಡ ಯಾವುದೇ ಕೆಲಸದಿಂದ ಸಾವು ಸಂಭವಿಸಿದರೆ ಶಿಕ್ಷೆ ಉಂಟು. ಅದು 10 ವರ್ಷಗಳ ವರೆಗಿನ ಶಿಕ್ಷೆ ಮತ್ತು ದಂಡಕ್ಕೂ ಹೊಣೆ ಆಗುವ ಅಪರಾಧ.[2]

ಇಲ್ಲಿ ಮಹಿಳೆಯ ಒಪ್ಪಿಗೆಯಿಲ್ಲದೇ ಹೋದರೆ, ಅವರು ಜೀವಾವಧಿ ಶಿಕ್ಷೆಗೆ ಒಳಗಾಗುತ್ತಾರೆ. ತಾಯಿಯ ಜೀವ ಉಳಿಸುವ ಸದುದ್ದೇಶದಿಂದ ಕೈಗೊಂಡ ಗರ್ಭಪಾತ ಅಪರಾಧವಲ್ಲ. ಇತರೇ ಸಮಯದಲ್ಲಿ ಮಗು ಜೀವಂತವಾಗಿ ಹುಟ್ಟುವುದನ್ನು ತಡೆಯುವುದು ಅಥವಾ ಹುಟ್ಟಿದರೆ ಅದು ಸಾಯುವಂತೆ ಮಾಡುವುದು ಅಪರಾಧವಾಗುತ್ತದೆ. ಇದಕ್ಕೆ 10 ವರ್ಷಗಳ ವರೆಗಿನ ಶಿಕ್ಷೆ ಅಥವಾ ದಂಡ ಎರಡನ್ನೂ ವಿಧಿಸಬಹುದು.[3]



-- O --

"ಬೇಡ ನಮಗೆ ಹೆಣ್ಣು ಗಂಡೆಂಬ ಬೇಧ
ಇರಲಿ ನಮಗೆ ಸಮಾನತೆಯ ಸ್ವಾದ"

---

1 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 312
2 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 314
3 ಭಾರತೀಯ ದಂಡ ಸಂಹಿತೆ 1860 - ಕಲಂ 315

# 7. ಗಂಡನ ಮನೆಯಲ್ಲಿ ಕಿರುಕುಳ



25

ಹೆಂಡತಿ ಅಥವಾ ಸೊಸೆಗೆ ಗಂಡನ ಮನೆಯಲ್ಲಿ ಹಿಂಸೆ ನೀಡುವುದು ಸಹಜವಾಗಿದೆ. ಮದುವೆಯಾದ ಮೇಲೆ ಗಂಡನ ಮನೆಯಲ್ಲಿ ಹೆಂಡತಿಗೆ ತೊಂದರೆ ಕೊಡುವುದು, ಪೀಡಿಸುವುದು, ಸೊಸೆಗೆ ನೀಡುವ ಹಿಂಸೆಗಳಿಗೆ ಶಿಕ್ಷೆ ವಿಧಿಸಬಹುದಾಗಿರುತ್ತದೆ. 1983ನೇ ಡಿಸೆಂಬರ್ 26ರಿಂದ ಈ ಕಾನೂನು ಜಾರಿಗೆ ಬಂದಿದೆ.

ಯಾವುದೇ ಮಹಿಳೆಗೆ ಗಂಡ ಅಥವಾ ಆತನ ಸಂಬಂಧಿಗಳಿಂದ ಯಾವುದೇ ರೀತಿಯ ಹಿಂಸೆಯನ್ನು ಆ ಮಹಿಳೆಗೆ ನೀಡುವಂತಿಲ್ಲ. ಹಾಗೆ ನೀಡಿದರೆ ಅಂತವರಿಗೆ 3 ವರ್ಷಗಳ ಜೈಲು ಶಿಕ್ಷೆ ವಿಧಿಸಬಹುದು. ಮತ್ತು ದಂಡಕ್ಕೂ ಅವರು ಹೊಣೆಯಾಗುತ್ತಾರೆ.

ಇಲ್ಲಿ ಹಿಂಸೆ ಎಂದರೆ, ಮಹಿಳೆಗೆ ಉದ್ದೇಶ ಪೂರ್ವಕವಾಗಿ ನೀಡುವ ಕಿರುಕುಳ ಆಗಿರುತ್ತದೆ. ಆ ಮೂಲಕ ಆಕೆಯನ್ನು ಆತ್ಮಹತ್ಯೆ

ಮಾಡಿಕೊಳ್ಳುವವಂತೆ, ಅಥವಾ ಜೀವಕ್ಕೆ ಅಥವಾ ದೇಹಕ್ಕೆ ಗಂಭೀರ ಹಾನಿಮಾಡಿಕೊಳ್ಳುವಂತೆ ಪ್ರಚೋಧಿಸುವ ನಡತೆ ಹಿಂಸೆ ಎಂದಾಗುತ್ತದೆ. ಯಾವುದೇ ಮಹಿಳೆಗೆ ಅಥವಾ ಈಕೆಯ ಸಂಬಂಧಿಕರಿಗೆ ಗಂಡ ಅಥವಾ ಗಂಡನ ಕಡೆಯವರು, ತಮ್ಮ ಕಾನೂನು ಬಾಹಿರ ಬೇಡಿಕೆಗಳನ್ನು, ಅಂದರೆ ವರದಕ್ಷಿಣೆ ನೀಡುವಂತೆ ಹೆದರಿಸುವ ಉದ್ದೇಶದಿಂದ ಕೊಡುವ ಯಾವುದೇ ಕಿರುಕುಳ, ಕ್ರೌರ್ಯ ಅಥವಾ ಹಿಂಸೆ ಅಪರಾಧವಾಗುತ್ತದೆ. ಗಂಡನ ನಪುಂಸಕತೆಯೂ ಸಹ ಮಹಿಳೆಯ ಮೇಲೆ ನಡೆಯುವ ಹಿಂಸೆ ಎಂದು ನಮ್ಮ ಸರ್ವೋಚ್ಚ ನ್ಯಾಯಾಲಯ ಹೇಳಿದೆ. ಹಿಂಸೆ ಮಾನಸಿಕವಾಗಿರಬಹುದು ಅಥವಾ ದೈಹಿಕವಾಗಿರಬಹುದು.[1]

ಹಾಗೆಯೇ, ಮದುವೆಯಾಗಿ ಏಳು ವರ್ಷಗಳ ಒಳಗೆ ಯಾವುದೇ ಮಹಿಳೆಯ ಸಾವು ಸಂಭವಿಸಿದ್ದರೆ, ಅದು ಅಪರಾಧವಾಗುತ್ತದೆ. ಇಲ್ಲಿ ಆಕೆಯ ದೇಹದ ಮೇಲೆ ಯಾವುದೇ ರೀತಿಯ ಗಾಯ ಅಥವಾ ಸುಟ್ಟ ಗಾಯಗಳು ಅಥವಾ ಯಾವುದೇ ರೀತಿಯ ಸಾವು ಈ ಅಪರಾಧಕ್ಕೆ ಇಂಬು ಕೊಡುತ್ತದೆ. ಅಂತಹ ಸಾವಿಗೆ ಮುನ್ನ, ಆಕೆಯ ಗಂಡ ಅಥವಾ ಗಂಡನ ಸಂಬಂಧಿಕರು, ವರದಕ್ಷಿಣೆ ಕೊಡುವಂತೆ ಕಿರುಕುಳ ನೀಡಿದ್ದರೆ, ಅದನ್ನು "ವರದಕ್ಷಿಣೆ ಸಾವು" ಎಂದು ಹೇಳಲಾಗುತ್ತದೆ. ಇಂತಹ ವರದಕ್ಷಿಣೆ ಸಾವಿಗೆ ಕಾರಣ ಆದವರಿಗೆ ಶಿಕ್ಷೆ ಉಂಟು. ಇದು 7 ವರ್ಷಗಳ ಶಿಕ್ಷೆಯಿಂದ ಜೀವಾವಧಿ ಕಾರಾಗೃಹ ಶಿಕ್ಷೆಗೆ ಒಳಪಡಿಸಬಹುದಾದ ಅಪರಾಧವಾಗಿದೆ.

ಈ ಅಪರಾಧಗಳ ಕುರಿತು ನೊಂದ ಮಹಿಳೆ, ಅಥವಾ ಆಕೆಯ ತಂದೆ, ತಾಯಿ, ಸಹೋದರ, ಸಹೋದರಿಯರು ಅಥವಾ ಆಕೆಯ ಹೆತ್ತವರ ಸಹೋದರ, ಸಹೋದರ, ಸಹೋದರಿಯರು ದೂರು ನೀಡಬಹುದು.



---

1 ಫೌಜುದಾರ ಪ್ರಕ್ರಿಯಾ ಸಂಹಿತೆ 1973 ಕಲಂ 499ಎ

ಯಾವುದೇ ಮಹಿಳೆಯ ಸಾವು ಅಸಹಜ ರೀತಿಯಲ್ಲಿ ಆಗಿದ್ದರೆ, ಅಂತಹ ಸಾವು ಯಾರದ್ದಾದರೂ ಕೃತ್ಯದಿಂದ ನಡೆದಿದೆ ಎಂಬ ಅನುಮಾನವಿದ್ದರೆ ಅಂತಹ ಸಾವಿಗೆ ಬಲಿಯಾದ ಮಹಿಳೆಯ ಶವವನ್ನು ಏಕಾ ಏಕಿ ಸುಡುವುದು ಅಥವಾ ಹೂಳುವುದು ಅಪರಾಧವಾಗುತ್ತದೆ. ಇಲ್ಲಿ ಆ ಮಹಿಳೆಯ ಆತ್ಮಹತ್ಯೆ ಇರಬಹು, ಕೊಲೆ, ಅಪಘಾತ ಇತ್ಯಾದಿ ಯಾವುದೇ ಕಾರಣ ಇರಬಹುದು. ಆಗ ಅಂತಹ ಶವವನ್ನು ವಿಲೇವಾರಿ ಮಾಡುವ ಮೊದಲು ಅದನ್ನು ಹತ್ತಿರದ ಜಿಲ್ಲಾ ಅಥವಾ ತಾಲ್ಲೂಕು ಮ್ಯಾಜಿಸ್ಟ್ರೇಟ್‌ರ ಸಮ್ಮುಖದಲ್ಲಿ ಮತ್ತು ನೆರೆಹೊರೆಯ ಇಬ್ಬರು ಗೌರವಾನ್ವಿತ ವ್ಯಕ್ತಿಗಳ ಸಮಕ್ಷಮದಲ್ಲಿ ವಿಚಾರಣೆ ಮಾಡಬೇಕು. ಇಲ್ಲಿ ಸದರಿ ಶವದ ಮೇಲಿನ ಗಾಯದ, ಸುಟ್ಟ, ಮುರಿದ ಅಥವಾ ಇತರೆ ಯಾವುದೇ ಬಗೆಯ ಗುರುತಗಳನ್ನು ಗಮನಿಸಿ, ತಿಳಿಸಿದ ವರದಿ ತಯಾರಿಸಬೇಕು.'

27 ಮದುವೆ ಆಗಿ 7 ವರ್ಷಗಳ ಒಳಗೆ ಸದರಿ ಮಹಿಳೆ ಆತ್ಮಹತ್ಯೆ ಮಾಡಿಕೊಂಡಿದ್ದರೆ, ಅಥವಾ ಅನುಮಾನಾಸ್ಪದ ಸಾವಿಗೆ ಬಲಿಯಾಗಿದ್ದರೆ ಅಥವಾ ಅಂತಹ ಸಾವಿಗೆ ಸಂಬಂಧಿಸಿದಂತೆ ಆಕೆಯ ಬಂಧುಗಳು ಕೋರಿಕೊಂಡರೆ ಆಗ ಅದರಿ ಶವವನ್ನು ಹತ್ತಿರದ ಸಿವಿಲ್ ಸರ್ಜನ್ ಅಥವಾ ತಜ್ಞ ವೈದ್ಯನ ಬಳಿಗೆ ಪರೀಕ್ಷೆಗೆ ಕಳುಹಿಸಿಬೇಕು.[2] ಇಲ್ಲಿ ಆಕೆಯ ಬಂಧುಗಳು ಎಂದರೆ, ಹೆತ್ತವರು, ಮಕ್ಕಳು, ಪತಿ, ಸಹೋದರ–ಸಹೋದರಿ ಯಾರೂ ಆಗಬಹುದು.

-- O --

"ಸಾಕ್ಷರ ನಾರಿ ಪ್ರಗತಿಗೆ ದಾರಿ"

---

1 ಕ್ರಿಮಿನಲ್ ಪ್ರೊಸಿಜರ್ ಕೋಡ್ 1973 ಸೆಕ್ಷನ್ 174
2 ಕ್ರಿಮಿನಲ್ ಪ್ರೊಸಿಜರ್ ಕೋಡ್ 1973 ಸೆಕ್ಷನ್ 174 (3)

# 8. ಹೆರಿಗೆ ಸೌಲಭ್ಯದ ಕಾನೂನು

ತಾಯ್ತನನ್ನ ಯಾವುದೇ ಹೆಣ್ಣಿನ ಹೆಮ್ಮೆಯ ಅವಸ್ಥೆ. ಮತ್ತು ಪ್ರಕತಿ ಸಹಜ ಸ್ಥಿತಿ. ಅದು ದುಡಿಯುವ ಮಹಿಳೆಗೆ ಈ ಹೆರಿಗೆ ಇತ್ಯಾದಿ ಸಮಯದಲ್ಲಿ ದೈಹಿಕವಾಗಿ ಬಳಲಿದಾಗ ಅವಳ ಜೀವನ ಭದ್ರತೆಗೆ ಧಕ್ಕೆಯಾಗದಿರಲೀ ಎಂದು ಕಾನೂನು ಇದೆ.

ಯಾವುದೇ ಕಾರ್ಖಾನೆಯಲ್ಲಿ, ಗಣಿ, ತೋಟಗಳಲ್ಲಿ ದುಡಿಯುವ ಮಹಿಳೆಗೆ ಮಗು ಹುಟ್ಟುವ ಮೊದಲು ಮತ್ತು ಅನಂತರದ ಅವಧಿಯಲ್ಲಿ ಇರಬೇಕಾದ ಸೌಲಭ್ಯಗಳನ್ನು ಈ ಕಾನೂನು ತಿಳಿಸುತ್ತದೆ.

ಯಾವುದೇ ಮಹಿಳೆ ಹೆರಿಗೆ ಅಥವಾ ಗರ್ಭಸ್ರಾವದ ನಂತರ ಆರು ವಾರಗಳವರೆಗೆ ಅವಳನ್ನು ಯಾವುದೇ ಉದ್ಯೋಗಗಳಲ್ಲಿ ತೊಡಗಿಸಬಾರದು. ಹೆರಿಗೆಗೆ ಮೊದಲು, 6 ವಾರಗಳ ಮೊದಲಿನಿಂದಲೂ ಕಠಿಣವಾದ ಕೆಲಸ ಅವಳಿಗೆ ಕೊಡಬಾರದು. ಬಹಳ ಸಮಯದವರೆಗೆ ನಿಂತುಕೊಂಡು ಮಾಡುವಂತಹ ಕೆಲಸ ನೀಡಬಾರದು. ಅಥವಾ ಗರ್ಭಸ್ರಾವವಾಗುವ ಸಾಧ್ಯತೆಯಿರುವ ಯಾವುದೇ ಕೆಲಸಕ್ಕೂ ಮಾಲೀಕನು ಅವಳನ್ನು ತೊಡಗಿಸಬಾರದು.[1] ಇಲ್ಲಿ ಗರ್ಭಿಣಿ ಸ್ತ್ರೀಯ ಆರೋಗ್ಯ ಮತ್ತು ಅವಳ ಮಗುವಿನ ಆರೋಗ್ಯಕ್ಕೆ ಹಾನಿಯಾಗುವ ಯಾವುದೇ ಕೆಲಸವನ್ನು ಅವಳಿಗೆ ಹಚ್ಚಬಾರದು.

ಯಾವುದೇ ಮಹಿಳೆ ಹೆರಿಗೆಗೆ ಮೊದಲು 12 ತಿಂಗಳಿಗಿಂತ ಮೊದಲು 160 ದಿನ ಕೆಲಸ ಮಾಡಿದ್ದರೆ ಅವಳಿಗೆ ಹೆರಿಗೆಗೆ ಮುನ್ನ 6 ವಾರ ಮತ್ತು ಹೆರಿಗೆ ನಂತರ 6 ವಾರಗಳ ರಜೆ ಪಡೆಯಲು ಅರ್ಹಳಾಗುತ್ತಾಳೆ. ಈ ರಜೆಯಲ್ಲಿ ದಿನಗೂಲಿಯ ಸರಾಸರಿ ಸಂಬಳ

---

1 ಪ್ರಸೂತಿ ಸೌಕರ್ಯ ಕಾನೂನು 1961 - ಕಲಂ 4

2 ಪ್ರಸೂತಿ ಸೌಕರ್ಯ ಕಾನೂನು 1961 - ಕಲಂ 5

ಪಡೆಯುತ್ತಾಳೆ.[2] ಈ ಸೌಲಭ್ಯ ಆ ಮಹಿಳೆ ತೀರಿಕೊಂಡರೂ ಸಹ, ತೀರಿಕೊಂಡ ದಿನದವರೆಗೆ ಸಿಗುತ್ತದೆ. ಒಂದು ವೇಳೆ ಮಗುವನ್ನು ಬಿಟ್ಟು ತಾಯಿ ಮಾತ್ರ ತೀರಿಕೊಂಡರೆ ಹೆರಿಗೆ ಆದ ದಿನದಿಂದ 6 ವಾರಗಳ ವರೆಗೆ ಸಿಗುವ ಸೌಲಭ್ಯ ಆ ಮಗುವಿಗೆ ಸಿಗುತ್ತದೆ. ಒಂದು ವೇಳೆ ಮಗುವೇ ತೀರಿಕೊಂಡಿದ್ದರೆ, ಆ ಮಗು ತೀರಿಕೊಂಡ ದಿನದವರೆಗೆ ಆ ಮಹಿಳೆಗೆ ಈ ಸೌಲಭ್ಯ ಸಿಗುತ್ತದೆ.

ಗರ್ಭಾವಸ್ಥೆಯಲ್ಲಿನ ಖರ್ಚಿಗೆಂದು ರೂ. 250-00ನ್ನು ವೈದ್ಯಕೀಯ ಬೋನಸ್ಸನ್ನೂ ಸಂಬಳದ ಜೊತೆಗೆ ಮಾಲೀಕ ನೀಡಬೇಕು.[3] ಮೇಲೆ ಹೇಳಿದ ರಜೆಯ ಜೊತೆಗೆ ಒಂದು ತಿಂಗಳವರೆಗಿನ ಸಂಬಳ ಸಹಿತ ರಜೆಯನ್ನು ಹೆರಿಗೆಯ ಸಂಬಂಧ ಅಥವಾ ಗರ್ಭಸ್ರಾವದ ಸಂಬಂಧ ನೋವು, ಬೇನೆ, ಕಾಯಿಲೆಗಳಿಗೆ ರಜೆ ಪಡೆಯುವ ಹಕ್ಕು ಅವಳಿಗೆ ಇರುತ್ತದೆ.[4]

ಹೆರಿಗೆಯ ನಂತರ ಮಗುವಿಗೆ 15 ತಿಂಗಳು ತುಂಬುವವರೆಗೆ ಅವಳ ಕೆಲಸದ ಸಮಯದಲ್ಲಿ ದಿನಕ್ಕೆ ಎರಡು ಬಾರಿ ಮಗುವಿಗೆ
29 ಹಾಲುಣಿಸಲು ಅಥವಾ ಆರೈಕೆ, ವಿಶ್ರಾಂತಿ ಪಡೆಯಲು ಹಕ್ಕು ಅವಳಿಗಿರುತ್ತದೆ. ಇಲ್ಲಿ ಅವಳ ಸಂಬಳದಲ್ಲಿ ಯಾವುದೇ ಕಡಿತ ಮಾಡುವಂತಿಲ್ಲ.

ಮಗುವಿನ ಆರೈಕೆ ಸಂಬಂಧ ಆ ಮಹಿಳೆ ಕೆಲಸಕ್ಕೆ ಗೈರು ಹಾಜರಾದರೆ ಅವಳನ್ನು ಕೆಲಸದಿಂದ ತೆಗೆದು ಹಾಕುವಂತಿಲ್ಲ. ಆದರೆ ಯಾವುದೇ ಮಹಿಳಾ ಕಾರ್ಮಿಕರು ಮಾಲೀಕನು ಅನುಮತಿ ನೀಡಿದ ಅವಧಿ ಮೀರಿ ಗೈರು ಹಾಜರಿಯಾದರೆ ಆ ಅವಧಿಯಲ್ಲಿ ಹೆರಿಗೆ ಸೌಲಭ್ಯ ಕಳೆದುಕೊಳ್ಳುತ್ತಾಳೆ. ಈ ಮೇಲೆ ಹೇಳಿದ ಸೌಲಭ್ಯಗಳನ್ನು ಮಹಿಳಾ ಕಾರ್ಮಿಕಳಿಗೆ ಒದಗಿಸುವಲ್ಲಿ ಮಾಲೀಕ ತಪ್ಪಿದ್ದಲ್ಲಿ ಅಂತಹವರಿಗೆ ಮೂರು ತಿಂಗಳ ಶಿಕ್ಷೆಯಿಂದ 1 ವರ್ಷದವರೆಗೆ ಶಿಕ್ಷೆ ಮತ್ತು ಐದು ಸಾವಿರ ರೂಪಾಯಿಗಳ ದಂಡ ವಿಧಿಸಬಹುದಾಗಿರುತ್ತದೆ.[5]

---

3 ಪ್ರಸೂತಿ ಸೌಕರ್ಯ ಕಾನೂನು 1961 - ಕಲಂ 8

4 ಪ್ರಸೂತಿ ಸೌಕರ್ಯ ಕಾನೂನು 1961 - ಕಲಂ 10

5 ಪ್ರಸೂತಿ ಸೌಕರ್ಯ ಕಾನೂನು 1961 - ಕಲಂ 21

# 9. ಭಾರತೀಯ ದಂಡ ಸಂಹಿತೆ





## ಅನ್ವಯ ಇತರೆ ಅಪರಾಧಗಳು

### ಮಹಿಳೆಯನ್ನು ಚುಡಾಯಿಸಿದರೆ?

ಯಾರೇ ವ್ಯಕ್ತಿಯು ಮಹಿಳೆಯ ಮರ್ಯಾದೆಗೆ ಅಪಮಾನ ಮಾಡುವ ಹಾಗಿಲ್ಲ. ಆ ಉದ್ದೇಶದಿಂದ ಆಕೆ ಕೇಳಿಸಿಕೊಳ್ಳಲಿ ಎಂಬ ಉದ್ದೇಶದಿಂದ, ಯಾವುದೇ ಮಾತು ಹೇಳುವುದು ಅಥವಾ ಆಕೆ ನೋಡಲಿ ಎಂದು ಯಾವುದೇ ಸನ್ನೆ ಮಾಡುವುದು ಅಥವಾ ಯಾವುದೇ ವಸ್ತುವನ್ನು ಪ್ರದರ್ಶಿಸುವುದು ಅಥವಾ ಮಹಿಳೆಯ ಏಕಾಂತದಲ್ಲಿ ಆಕೆಗೆ ತೋರಿಸಿದ್ದರೆ ಅಂತಹವರಿಗೆ ಶಿಕ್ಷೆ ಇದೆ. ಒಂದು ವರ್ಷದವರೆಗಿನ ಜೈಲು ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದು. ಇಲ್ಲಿ ಸಿಳ್ಳೆ ಹಾಕುವುದು, ಕಣ್ಣು ಹೊಡೆಯುವುದು,

ಇರಬಹುದು. ಸನ್ನೆ ಮಾಡುವುದು ಅಸಭ್ಯ ಸಂಗತಿಗಳೊಂದಿಗೆ ಪತ್ರ ಬರೆಯುವುದು, ಇರಬಹುದು, ಪೋಲಿ ಮಾತನಾಡುವುದು, ಚುಡಾಯಿಸುವುದು ಎಲ್ಲವೂ ಅಪರಾಧವಾಗುತ್ತದೆ.[1] ಮಾನಭಂಗಕ್ಕೆ ಯತ್ನಿಸಿದರೆ?

ಮಾನಭಂಗ ಮಾಡುವ ಉದ್ದೇಶದಿಂದ, ಬಲ ಪ್ರಯೋಗ ಮಾಡುವುದು ಅಥವಾ ಆಕ್ರಮಣ ಮಾಡುವುದು ಅಪರಾಧ. ಅಂತಹವರಿಗೆ 2 ವರ್ಷಗಳ ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸಬಹುದಾಗಿದೆ. ಇಲ್ಲಿ ಮಹಿಳೆ ಅಂದರೆ, ಯಾವ ವಯಸ್ಸಿನ ಸ್ತ್ರೀಯೂ ಆಗಬಹುದು. ಹೆಣ್ಣು ಮಗುವೂ ಸಹಾ ಮಹಿಳೆ ಆಗುತ್ತದೆ.[2]



1 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 509

2 ಭಾರತೀಯ ದಂಡ ಸಂಹಿತೆ 1860 - ಸೆಕ್ಷನ್ 354

# 10. ಲೈಂಗಿಕ ಅಪರಾಧಗಳು





ಹೆಣ್ಣಿನ ಮೇಲೆ ನಡೆಯುವ ಅತ್ಯಂತ ಅಮಾನವೀಯ ದೌರ್ಜನ್ಯವೆಂದರೆ ಅದು ಅತ್ಯಾಚಾರ. ಪುರುಷನು ತನ್ನ ದೈಹಿಕ ದೌರ್ಬಲ್ಯಕ್ಕೋ ಅಥವಾ ತನ್ನ ಪೌರುಷ ಪ್ರದರ್ಶನಕ್ಕೋ ನಡೆಸುವ ಈ ಕ್ರಿಯೆ ಖಂಡನೀಯ. ವಿಪರ್ಯಾಸ ಎಂದರೆ ತನ್ನ ಯಾವುದೇ ಪಾತ್ರ ಅಥವಾ ತಪ್ಪು ಇಲ್ಲದೇ ತನ್ನ ಅಸ್ತಿತ್ವವನ್ನು ನುಚ್ಚಾಗಿಸುವ ಈ ಅತ್ಯಾಚಾರದಂತ ಘೋರ ಅಪರಾಧಕ್ಕೆ ಬಲಿಯಾದ ಮಹಿಳೆಗೆ ನಮ್ಮ ಸಮಾಜ 'ಶೀಲ' 'ಪಾವಿತ್ರ್ಯತೆ' ಇತ್ಯಾದಿಗಳ ಭ್ರಮಾಪಟ್ಟದಲ್ಲಿ ಸಿಕ್ಕಿಸಿ ನರಳಿಸುವುದು, ಈ ಸಂಬಂಧ ಇರುವ ಕಾನೂನೆಂದರೆ,

ಯಾವೊಬ್ಬ ಗಂಡಸು ಇನ್ನೊಂದು ಮಹಿಳೆಯೊಡನೆ

1. ಆಕೆಯ ಇಚ್ಚೆಗೆ ವಿರುದ್ಧವಾಗಿ,

2. ಆಕೆಯ ಒಪ್ಪಿಗೆಯಿಲ್ಲದೇ,

3. ಆಕೆಗೆ ಸಾವಿನ ಅಥವಾ ಹಾನಿಯ ಭಯ ಹುಟ್ಟಿಸಿ ಒಪ್ಪಿಗೆ ಪಡೆದಿದ್ದರೆ,

4. ಆತನಿಗೆ ಆಕೆ ತನ್ನ ಹೆಂಡತಿ ಅಲ್ಲವೆಂದು ತಿಳಿದಿದ್ದೂ, ಸಹಾ ಆಕೆಗೆ ಆತನನ್ನು ತಾನು ಕಾನೂನುಬದ್ಧವಾಗಿ ಮದುವೆ ಆದವನೆಂದು ನಂಬಿಸಿ ಒಪ್ಪಿಗೆ ಪಡೆದಿದ್ದರೆ,

5. ಆಕೆಗೆ ಮದ್ಯಪಾನ ಮಾಡಿಸಿ, ಒಪ್ಪಿಗೆ ಪಡೆದಿದ್ದರೆ, ಅಥವಾ ಆಕೆಗೆ ಬುದ್ಧಿ ಭ್ರಮಣೆ ಆಗಿದ್ದಾಗ ಅಥವಾ ಬೇರ್‍ಯಾವುದೋ ಮಂಕುಗೊಳಿಸುವ ವಸ್ತುವನ್ನು ಉಪಯೋಗಿಸಿ ಒಪ್ಪಿಗೆ ಪಡೆದಿದ್ದರೆ,

6. ಆಕೆಗೆ 16 ವರ್ಷದೊಳಗೆ ವಯಸ್ಸಾಗಿದ್ದು, ಒಪ್ಪಿಗೆ ನೀಡಲೀ ಅಥವಾ ಇಲ್ಲದಿರಲಿ,

ಲೈಂಗಿಕ ಸಂಬಂಧ ಹೊಂದುವುದು ಅಪರಾಧ.[1]

ಈ ಅಪರಾಧಕ್ಕೆ 7 ವರ್ಷಕ್ಕೂ ಕಡಿಮೆಯಿಲ್ಲದಂತೆ ಜೀವಾವಧಿ ಶಿಕ್ಷೆ ವಿಧಿಸಬಹುದು. ಅಥವಾ 10 ವರ್ಷಗಳವರೆಗೆ ಶಿಕ್ಷೆ ಮತ್ತು
33 ದಂಡವನ್ನು ವಿಧಿಸಬಹುದಾಗಿರುತ್ತದೆ.

ಇಲ್ಲಿ ಮದುವೆಯಾದ ಹೆಂಡತಿ ಆಗಿದ್ದರೂ ಕೆಲವು ಸಂದರ್ಭದಲ್ಲಿ ಅನ್ವಯಿಸುತ್ತದೆ. ಆಕೆಗೆ 12 ತುಂಬಿರದಿದ್ದರೆ ಮೇಲ ಹೇಳಿದ ಶಿಕ್ಷೆಗೆ ಗುರಿಯಾಗಬಹುದಾದ ಅಪರಾಧವಾಗಿರುತ್ತದೆ. ಒಂದು ವೇಳೆ ಮದುವೆಯಾದ ಹೆಂಡತಿಯಾಗಿದ್ದರೂ ಸಹ ಆಕೆಗೆ 12 ರಿಂದ 15 ವರ್ಷಗಳವರೆಗೆ ವಯಸ್ಸಾಗಿದ್ದರೆ, ಅದು ಅತ್ಯಾಚಾರವಾಗುತ್ತದೆ. ಮತ್ತು 2 ವರ್ಷದವರೆಗಿನ ಶಿಕ್ಷೆ ಅಥವಾ ದಂಡ ಅಥವಾ ಎರಡನ್ನೂ ವಿಧಿಸುವ ಅಪರಾಧವಾಗುತ್ತದೆ.

ಕೆಲವು ವಿಶೇಷ ಸಂದರ್ಭಗಳಲ್ಲಿ ಅಂದರೆ,

1. ಪೋಲೀಸ್ ಅಧಿಕಾರಿಯು ಅತ್ಯಾಚಾರ ಮಾಡಿದ್ದರೆ,

---

1 ಭಾರತೀಯ ದಂಡ ಸಂಹಿತೆ ಕಲಂ 375

2. ಪೋಲೀಸ್ ಠಾಣೆಯಲ್ಲಿ ಅತ್ಯಾಚಾರವಾಗಿದ್ದರೆ,

3. ತನ್ನ ರಕ್ಷಣೆಯಲ್ಲಿರುವ ಮಹಿಳೆಯ ಮೇಲೆ ಪೋಲೀಸ್ ಅತ್ಯಾಚಾರವೆಸಗಿದ್ದರೆ,

4. ಸಾರ್ವಜನಿಕ ನೌಕರನಾಗಿದ್ದು, ತನ್ನ ಅಧಿಕಾರದ ದುರುಪಯೋಗ ಮಾಡಿಕೊಂಡಿದ್ದರೆ,

5. ಬಂಧಿಖಾನೆ (ಜೈಲಿನ) ಅಥವಾ ರಕ್ಷಣಾ ಗೃಹಗಳ ಅಥವಾ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಂಸ್ಥೆಗಳ ಆಡಳಿತ ಅಧಿಕಾರಿ ಆಗಿದ್ದು, ಅವರು, ಅಧಿಕಾರ ದುರುಪಯೋಗದಿಂದ ತನ್ನ ನಿವಾಸಿಗಳ ಮೇಲೆ ಅತ್ಯಾಚಾರ ಮಾಡಿದರೆ,

6. ಆಸ್ಪತ್ರೆಯ ಮೇಲ್ವಿಚಾರಕ ಸಿಬ್ಬಂಧಿ ತನ್ನ ಅಧಿಕಾರ ದುರುಪಯೋಗದಿಂದ ನರ್ಸ್, ಅಥವಾ ಇತರ ಮಹಿಳೆಯ ಮೇಲೆ ಅತ್ಯಾಚಾರ ಮಾಡಿದರೆ,

7. ಗರ್ಭಿಣಿ ಮಹಿಳೆಯೆಂದು ಗೊತ್ತಿದ್ದೂ ಅತ್ಯಾಚಾರ ಮಾಡಿದರೆ,



8. 12 ವರ್ಷದೊಳಗಿನ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರ ಮಾಡಿದರೆ,

9. ಸಾಮೂಹಿಕ ಅತ್ಯಾಚಾರ ಮಾಡಿದರೆ,

ಇವರೆಲ್ಲರಿಗೂ 10 ವರ್ಷಗಳಿಗೆ ಕಡಿಮೆ ಇಲ್ಲದಂತೆ ಶಿಕ್ಷೆಯನ್ನು ಅಥವಾ ಜೀವಾವಧಿ ಶಿಕ್ಷೆ ವಿಧಿಸಬಹುದು. ಇಲ್ಲವಾದರೆ ಮೇಲೆ ಹೇಳಿದ ಶಿಕ್ಷೆ ಮತ್ತು ದಂಡವನ್ನೂ ವಿಧಿಸಬಹುದಾಗಿರುತ್ತದೆ.[1]

ಇಲ್ಲಿ ಅತ್ಯಾಚಾರ ಸಂದರ್ಭದಲ್ಲಿ ಮಹಿಳೆ ಒಪ್ಪಿಗೆ ನೀಡಿದ್ದರೂ ಅದು ಆಕೆಯ ಮುಕ್ತ ಒಪ್ಪಿಗೆ ಆಗುವುದಿಲ್ಲ. ಮತ್ತು ಆಕೆ ತನ್ನ ಒಪ್ಪಿಗೆ ಇರಲಿಲ್ಲವೆಂದು ಹೇಳಿದರೆ ನ್ಯಾಯಾಲಯ ಅದನ್ನು ನಂಬಬಹುದು.

ಇದಲ್ಲದೆ ಹಲವಾರು ಸನ್ನಿವೇಶಗಳಲ್ಲಿ ಅಧಿಕಾರದಲ್ಲಿರುವ ಗಂಡಸು ತನ್ನ ಅಧೀನ ಕೆಲಸ ಮಾಡುವ ಮಹಿಳೆಯನ್ನು ತನ್ನ

---

1 ಭಾರತೀಯ ದಂಡ ಸಂಹಿತೆ ಕಲಂ 376 ಬಿ

ಅಧಿಕಾರದ ದುರುಪಯೋಗ ಮಾಡಿಕೊಂಡು, ಪುಸಲಾಯಿಸಿ, ಆಕೆಯೊಡನೆ ಸಂಭೋಗ ನಡೆಸಿದರೆ ಅದೂ ಸಹ ಶಿಕ್ಷಾರ್ಹ ಅಪರಾಧವಾಗುತ್ತದೆ.

ಇಲ್ಲಿ ಮೇಲೆ ಹೇಳಿದ ಅಪರಾಧ ಅತ್ಯಾಚಾರವಾಗದಿದ್ದರೂ 5 ವರ್ಷಗಳವರೆಗಿನ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾದ ಅಪರಾಧವಾಗುತ್ತದೆ.[1]

ಹಾಗೆಯೇ ನ್ಯಾಯಾಲಯದಿಂದ ತೀರ್ಪುಪಡೆದಿದ್ದು ಗಂಡ ಹೆಂಡತಿ ಬೇರೆ ಬೇರೆಯಾಗಿ ವಾಸಿಸುತ್ತಿದ್ದು ಆಕೆಯ ಸಮ್ಮತಿ ಇಲ್ಲದೇ ಸಂಭೋಗ ನಡೆಸಿದರೆ ಆತನಿಗೆ 2 ವರ್ಷಗಳ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾಗಿದೆ.[2]

ಹಾಗೆಯೇ ಯಾವುದೇ ಜೈಲು, ರಿಮ್ಯಾಂಡ್ ಹೋಂ ಅಥವಾ
35 ಮಹಿಳಾ ಮತ್ತು ಕಲ್ಯಾಣ ಸಂಸ್ಥೆಯಡಿ ಇರುವ ರಕ್ಷಣಾ ಗೃಹದಲ್ಲಿರುವ ಮಹಿಳೆಯನ್ನು ಸದರೀ ಸಂಸ್ಥೆಗಳ ಮೇಲ್ವಿಚಾರಕ ಅಥವಾ ವ್ಯವಸ್ಥಾಪಕನು ತಪ್ಪುದಾರಿಗೆಳೆದು ಅಥವಾ ಒಲಿಸಿಕೊಂಡು, ಅವಳೊಡನೆ ಸಂಭೋಗಿಸಿದರೆ ಅದು ಅಪರಾಧ. ಅಂತಹವನಿಗೆ 5 ವರ್ಷಗಳವರೆಗಿನ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾಗಿದೆ.[3]

ಇದೇ ರೀತಿಯಲ್ಲಿ ಆಸ್ಪತ್ರೆ ವ್ಯವಸ್ಥಾಪಕ ಸಿಬ್ಬಂದಿಯಿಂದ ಆಸ್ಪತ್ರೆಯಲ್ಲಿರುವ ಯಾವುದೇ ಮಹಿಳೆಯೊಡನೆ ಲೈಂಗಿಕ ಸಂಬಂಧ ನಡೆದರೂ ಅದೂ ಸಹ ಅಪರಾಧ. ಮತ್ತು ಅಂತಹ ಅಪರಾಧಿಗೆ 5 ವರ್ಷಗಳ ಕಾರಾಗೃಹ ಶಿಕ್ಷೆ ಮತ್ತು ದಂಡ ವಿಧಿಸಬಹುದಾಗಿದೆ.[4]

ಈ ಎಲ್ಲಾ ಸಂದರ್ಭಗಳಲ್ಲೂ ಗಂಡಸು ತನ್ನ ಅಧಿಕಾರದ ದುರುಪಯೋಗ ಮಾಡಿಕೊಂಡಿರಬೇಕು.

---

1 ಭಾರತೀಯ ದಂಡ ಸಂಹಿತೆ ಕಲಂ 376 ಬಿ

2 ಭಾರತೀಯ ಸಾಕ್ಷ ಅಧಿನಿಯಮ್ಮ ಕಲಂ 114 ಎ

3 ಭಾರತೀಯ ದಂಡ ಸಂಹಿತೆ ಕಲಂ 376 ಸಿ

4 ಭಾರತೀಯ ದಂಡ ಸಂಹಿತೆ ಕಲಂ 376 ಡಿ

# 11. ಮಹಿಳೆಯರಿಗೆ ಇರುವ ಇತರೇ ವಿಶೇಷ ಸೌಲತ್ತುಗಳು





**ಪೋಲೀಸ್ ಮತ್ತು ಮಹಿಳೆ:**

ಮಹಿಳೆಯನ್ನು ಪೋಲೀಸ್ ಠಾಣೆಗೆ ಕರೆಯುವಾಗ ಈ ನಿಬಂಧನೆ ಪಾಲಿಸಬೇಕು. ಸಂಜೆ 6 ಗಂಟೆಯಿಂದ ಬೆಳಗಿನ 6 ಗಂಡೆಯವರೆಗೆ ಕರೆಸಕೂಡದು, ಸಾಧ್ಯವಾದಷ್ಟು ಮಹಿಳೆ ಇರುವಲ್ಲಿಗೇ ಹೋಗಿ ವಿಚಾರಣೆ ಮಾಡಬೇಕು.

ಮಹಿಳೆಯನ್ನು ಆರೋಪದ ಮೇಲೆ ತಪಾಸಣೆ ಮಾಡುವುದಿದ್ದಲ್ಲಿ ಮಹಿಳೆಯೇ ಮಾಡಬೇಕು ಅಥವಾ ಮಹಿಳಾ

ಪೋಲೀಸ್ ಅಧಿಕಾರಿ ಅವರ ಎದುರು ಸಭ್ಯತೆಯ ಎಲ್ಲೆ ಮೀರದಂತೆ ವಿಚಾರಣೆ ಮಾಡಬೇಕು.[1]

ಮಹಿಳಾ ಆರೋಪಿಗೆ ಜಾಮೀನು ವಿಷಯದಲ್ಲಿ ಸಡಿಲವಾದ ರಿಯಾಯಿತಿಗಳು ಇವೆ.[2] ಬಂಧನದಲ್ಲಿರಿಸುವಾಗ ಮಹಿಳಾ ಆರೋಪಿಯನ್ನು ಪ್ರತ್ಯೇಕವಾದ ಜೈಲಿನಲ್ಲಿ ಇಡಬೇಕು.

1) ಯಾವುದೇ ಆರೋಪಿಯನ್ನು ಬಂಧಿಸಿದ 24 ಗಂಟೆಯ ಒಳಗಾಗಿ ನ್ಯಾಯಾಲಯದಲ್ಲಿ ಹಾಜರುಪಡಿಸಬೇಕು.

2) ಪೋಲೀಸರು ಯಾರನ್ನೇ ಬಂಧಿಸಿರಲಿ, ಹಾಗೆ ಬಂಧಿಸಲು ಕಾರಣ ತಿಳಿಸಬೇಕು. ಬಂಧಿತನಾದ ವ್ಯಕ್ತಿಗೆ ಜಾಮೀನಿನ ಬಗ್ಗೆ ಇರುವ ಅವಕಾಶ ತಿಳಿಸಬೇಕು.

3) ಬಂಧಿತನಾದ ವ್ಯಕ್ತಿಯ ಸಂಬಂಧಿತರು ಮತ್ತು ಸ್ನೇಹಿತರಿಗೆ ಆತ/ಆಕೆ ಬಂಧನದ ಬಗ್ಗೆ ತಿಳಿಸಬೇಕು.

37 4) ಬಂಧಿತನಾದ ವ್ಯಕ್ತಿಗೆ ತನ್ನ ವಕೀಲರನ್ನು ಭೇಟಿಮಾಡುವ ಅವಕಾಶ ನೀಡಬೇಕು.[3]

ಯಾವುದೇ ತಪಾಸಣೆಯ ಕಾಲದಲ್ಲಿ, ಮಹಿಳೆ ಇರುವ ಕೋಣೆ ಅಥವಾ ಸ್ಥಳವನ್ನು ಶೋಧಿಸುವುದಿದ್ದರೆ ಮತ್ತು ಅಂತಹ ಮಹಿಳೆಯು ಸಾರ್ವಜನಿಕರೆದುರು ಸಲೀಸಾಗಿ ಬರದಂತಹ ಸಂಪ್ರದಾಯದವಳಾಗಿದ್ದರೆ, ಮೊದಲು ಅಂತಹ ಮಹಿಳೆಗೆ ಆ ಸ್ಥಳದಿಂದ ಹೊರಹೋಗುವಂತೆ ತಿಳಿಸಬೇಕು. ಮತ್ತು ಅದಕ್ಕೆ ಅವಕಾಶ ಮಾಡಿಕೊಡಬೇಕು.[4] ಅಂದರೆ ಪೋಲೀಸರು ತಮ್ಮ ಉದ್ಧಟತನದಿಂದ ಯಾವುದೇ ಮಹಿಳೆಯ ಪದ್ಧತಿ, ರೂಢಿಗತ ಬದುಕಿಗೆ ಅಪಚಾರ, ನೋವು ಉಂಟುಮಾಡದಂತೆ ಈ ಕಾನೂನು ಸಹಕರಿಸುತ್ತದೆ.

ಮಹಿಳಾ ಆರೋಪಿಯನ್ನು ತಪಾಸಣೆ ಮಾಡುವುದಿದ್ದಲ್ಲಿ, ಮಹಿಳಾ ವೈದ್ಯರೆ ಮಾಡಬೇಕು ಅಥವಾ ಒಬ್ಬ ನೋಂದಾಯಿತ ಮಹಿಳಾ ವೈದ್ಯೆಯ ಉಸ್ತುವಾರಿಯಲ್ಲಿ ನಡೆಸಬೇಕು.[5]

---

1 ಪೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 51 (2)

2 ಪೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 437

3 ಪೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 50

4 ಪೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 47 (2)

5 ಪೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 53

# 12. ಬಾಲ್ಯ ವಿವಾಹ ನಿಷೇಧ





ಯಾವುದೇ ಒಂದು ಗಂಡು ಮತ್ತು ಒಂದು ಹೆಣ್ಣಿನ ವಿವಾಹ ಸಂಬಂಧ ಏರ್ಪಡಿಸುವುದು, ಸಮಾಜದಲ್ಲಿ ಗಂಡು ಹೆಣ್ಣುಗಳ ನಡುವಿನ ದೈಹಿಕ ಸಂಬಂಧಕ್ಕೆ ಕಾನೂನುಬದ್ಧ ಸಮ್ಮತಿ ನೀಡುವುದರ ಮುಖಾಂತರ ಒಂದು ಜನಾಂಗದ ಮುಂದಿನ ಬೆಳವಣಿಗೆಗೆ ಆರೋಗ್ಯಕರ ಸಂತಾನ ಸೃಷ್ಟಿಗೆ ಅನುಮತಿ ನೀಡುವುದೇ ಆಗಿರುತ್ತದೆ. ಇದರಲ್ಲಿ ಗಂಡು ಮತ್ತು ಹೆಣ್ಣಿನ ವಯಸ್ಸು ಮಾನಸಿಕವಾಗಿ ಮತ್ತು ವೈಜ್ಞಾನಿಕವಾಗಿ ಜವಾಬ್ದಾರಿಯುತ ವ್ಯವಸ್ಥೆಗೆ ಮೂಲ ಕಾರಣವಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಗಂಡು ಮಗುವಿಗೆ ವಿವಾಹ ಕಾಲಕ್ಕೆ 21 ವರ್ಷಗಳಿಗಿಂತ ಕಡಿಮೆ ವಯಸ್ಸಿದ್ದಲ್ಲಿ ಅಥವಾ ಹೆಣ್ಣು ಮಗುವಿಗೆ 18 ವರ್ಷ ವಯಸ್ಸಿಗಿಂತ ಕಡಿಮೆ ಇದ್ದಲ್ಲಿ, ಅಂತಹವರ ವಿವಾಹ

ಕಾನೂನು ಬಾಹಿರವಾಗಿರುತ್ತದೆ.[1] ಒಂದು ವೇಳೆ 21 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನ ಗಂಡು 18 ವರ್ಷಕ್ಕಿಂಡ ಕಡಿಮೆ ವಯಸ್ಸಿನ ಹೆಣ್ಣಿನ ಜೊತೆ ಮದುವೆಯಾದಲ್ಲಿ ಅದು ಅಪರಾಧ. ಆತನಿಗೆ ಮೂರು ತಿಂಗಳ ಜೈಲು ಶಿಕ್ಷೆ ಮತ್ತು ದಂಡವನ್ನೂ ವಿಧಿಸಬಹುದಾಗಿರುತ್ತದೆ.[2] ಇಂತಹ ಮದುವೆಗಳನ್ನು ನೆರವೇರಿಸುವ ಹೆತ್ತವರು ಅಥವಾ ಪೋಷಕರು ಸಹಾ ಶಿಕ್ಷೆಗೆ ಗುರಿಯಾಗುತ್ತಾರೆ. ಅವರಿಗೂ ಸಹ 3 ತಿಂಗಳ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾಗಿರುತ್ತದೆ. ಆದರೆ ಇಲ್ಲಿ ಇಂತಹ ಮದುವೆಯಲ್ಲಿ ಪಾಲ್ಗೊಂಡ ಯಾವುದೇ ಮಹಿಳೆಗೆ ಜೈಲು ಶಿಕ್ಷೆ ನೀಡಲು ಬರುವುದಿಲ್ಲ.



1 ಬಾಲ್ಯ ವಿವಾಹ ನಿಷೇಧ ಕಾನೂನು 1929

2 ಬಾಲ್ಯ ವಿವಾಹ ನಿಷೇಧ ಕಾನೂನು 1929-ಕಲಂ 4

# 13. ಮಹಿಳಾ ಕಾರ್ಮಿಕರ ಹಕ್ಕುಗಳು

ಮಹಿಳಾ ಕಾರ್ಮಿಕಳನ್ನು ಯಂತ್ರವು ಚಾಲನೆಯಲ್ಲಿದ್ದಾಗ ಅವುಗಳನ್ನು ಶುದ್ಧಗೊಳಿಸುವುದು, ಎಣ್ಣೆ ಹಾಕುವುದು ಅಥವಾ ಅವುಗಳ ಭಾಗಗಳನ್ನು ಸರಿಪಡಿಸುವ ಇತ್ಯಾದಿ ಅಪಾಯಕರ ಕೆಲಸಗಳನ್ನು ಮಹಿಳೆಯರಿಗೆ ಕೊಡಬಾರದು. ಇಂತಹ ಕೆಲಸಗಳನ್ನು ಮಾಡುವಾಗ ಅವಳ ದೇಹಕ್ಕೆ ಹಾನಿ ಉಂಟಾಗುವಂತಿದ್ದರೆ ಅಥವಾ ರೋಗ ಬರುವಂತಿದ್ದರೆ ಆ ಕೆಲಸ ನೀಡುವಂತಿಲ್ಲ. ಭಾರ ಎತ್ತುವ, ಭಾರ ಒಯ್ಯುವ ಕೆಲಸ ನೀಡುವಂತಿಲ್ಲ.[1] ಹಾಗೆಯೇ ಸಾಮಾನ್ಯವಾಗಿ 30ಕ್ಕಿಂತ ಹೆಚ್ಚು ಮಹಿಳಾ ಕಾರ್ಮಿಕರನ್ನು ನಿಯಮಿಸಿದ ಕಾರ್ಖಾನೆಗಳಲ್ಲಿ, ಅವರುಗಳ ಹಸುಳೆಗಳ, ಮಕ್ಕಳ ಪಾಲನೆಗೆ ಶಿಶುಪಾಲನಾ ವ್ಯವಸ್ಥೆಗೆ ಒಂದು ಸೂಕ್ತ ಕೋಣೆಯನ್ನು ಒದಗಿಸಬೇಕು.[2] ಇಲ್ಲಿ ಸಾಕಷ್ಟು ಗಾಳಿ, ಬೆಳಕು, ಶುಭ್ರ ವ್ಯವಸ್ಥೆ ಮತ್ತು ಒಬ್ಬ ನುರಿತ ಮಹಿಳಾ ಸೇವೆಯನ್ನು ನೀಡಬೇಕು. ಗಣಿ, ತೋಟ ಮತ್ತು ಬೀಡಿ ಮತ್ತು ಸಿಗಾರ್ ಕೆಲಸಗಾರರಲ್ಲಿ ಮಹಿಳಾ ಉದ್ಯೋಗಿಗಳಿಗೆ ಸಂಜೆ 7 ಗಂಟೆಯಿಂದ ಬೆಳಿಗ್ಗೆ 6 ಗಂಟೆಯವರೆಗೆ ಕೆಲಸ ಮಾಡುವುದು ನಿಷೇಧಿಸಿದೆ.



ಮಹಿಳೆ ಮತ್ತು ಪುರುಷರಿಗೆ ಸಮಾನವಾದ ಕೆಲಸಕ್ಕೆ ಸಮಾನ ವೇತನ ದೊರೆಯಬೇಕು ಎಂದು ಕಾನೂನಿದೆ.[3] ಇದಕ್ಕಾಗಿ ವಿಶೇಷ ಕಾನೂನು ರೂಪಿತಗೊಂಡಿದೆ.[4]

---

1 ಕಾರ್ಖಾನೆಯ ಕಾನೂನು 1948

2 ಕಾರ್ಖಾನೆಯ ಕಾನೂನು 1948 - ಕಲಂ 48

3 ಭಾರತೀಯ ಸಂವಿಧಾನ ವಿಧಿ – 39-ಡಿ

4 ಸಮಾನ ವೇತನ ಅಧಿನಿಯಮ 1976 - ಕಲಂ 4

# 14. ಮಹಿಳೆಯರ ಚಿತ್ರವನ್ನು ಅಶ್ಲೀಲವಾಗಿ ಪ್ರದರ್ಶಿಸುವುದು






ಈ ವ್ಯಾಪಾರಿ ಪ್ರಪಂಚದಲ್ಲಿ ವಸ್ತುಗಳ ತಯಾರಕರು ಅವುಗಳನ್ನು ಸುಲಭವಾಗಿ ಮಾರಾಟಮಾಡಲು ಜಾಹಿರಾತು ಮತ್ತು ಪ್ರಚಾರ ನೀಡುವುದು ರೂಢಿ. ಆದರೆ ಈ ಎಲ್ಲಾ ಜಾಹಿರಾತುಗಳಲ್ಲೂ ಅನಗತ್ಯವಾಗಿ ಮಹಿಳೆಯರ ಚಿತ್ರವನ್ನು ತುರುಕುವುದು, ಅಸಭ್ಯವಾಗಿ ಆಕೆ ಅಂಗಾಂಗಗಳ ಪ್ರದರ್ಶನ ಮಾಡುವುದು, ನಮ್ಮ ಸಮಾಜದಲ್ಲಿ ಮಹಿಳೆಯ ವ್ಯಕ್ತಿತ್ವದ ದುರುಪಯೋಗ ಮಾಡಿಕೊಳ್ಳುತ್ತಿರುವ ವ್ಯಾಪಾರೀ ಬುದ್ಧಿಗೆ, ತನ್ಮೂಲಕ ಆಕೆಯ ವ್ಯಕ್ತಿತ್ವವನ್ನು ಕೀಳು ಮಟ್ಟದಲ್ಲಿ ಪ್ರತಿಬಿಂಬಿಸುವುದಕ್ಕೂ ಕಡಿವಾಣವಿಲ್ಲವೆ?

ಇದೆ. ಹೀಗೆ ಯಾವುದೇ ರೀತಿಯ ಜಾಹಿರಾತಿನಲ್ಲಾಗಲೀ, ಪತ್ರಿಕೆಯಲ್ಲಾಗಲೀ, ಚಿತ್ರದಲ್ಲಿ ಮತ್ತು ಇನ್ನಯಾವುದೇ ರೀತಿಯಲ್ಲಿ ಮಹಿಳೆಯನ್ನು ಅಸಭ್ಯವಾಗಿ ಪ್ರದರ್ಶಿಸುವುದು ಅಪರಾಧವಾಗುತ್ತದೆ.[1] ಇದಕ್ಕೆ 2 ವರ್ಷಗಳವರೆಗಿನ ಜೈಲು ಶಿಕ್ಷೆ ಮತ್ತು 2 ಸಾವಿರ ರೂಪಾಯಿಗಳವರೆಗೆ ದಂಡವನ್ನೂ ವಿಧಿಸಬಹುದಾಗಿರುತ್ತದೆ. ಇದೇ ಅಪರಾಧವನ್ನು ಎರಡನೇ ಬಾರಿ ಮಾಡಿದರೆ ಶಿಕ್ಷೆಯು ಐದು ವರ್ಷಗಳವರೆಗಿನ ಜೈಲು ವಾಸ ಮತ್ತು ಹತ್ತು ಸಾವಿರ ರೂಪಾಯಿವರೆಗಿನ ದಂಡಕ್ಕೂ ಗುರಿಯಾಗುತ್ತಾರೆ.

## ಅಶ್ಲೀಲ ಅಥವಾ ಅಸಭ್ಯ ಪ್ರದರ್ಶನ ಎಂದರೇನು?

ಜಾಹಿರಾತು ಅಥವಾ ಚಿತ್ರದಲ್ಲಿ ಮಹಿಳೆಯ ಅಂಗಾಂಗಗಳ ಚಿತ್ರಣವಿದ್ದು, ಅದು ಯಾವುದೇ ರೀತಿಯಲ್ಲಿ ಅವಳ ಮರ್ಯಾದೆಗೆ ಅಥವಾ ಗೌರವಕ್ಕೆ ಧಕ್ಕೆಯುಂಟುಮಾಡುವಂತಿದ್ದರೆ ಮತ್ತು ಸಾರ್ವಜನಿಕರನ್ನು ಅನೀತಿಗೆ ಎಳೆಯುವಂತಿದ್ದರೆ, ಇದು ಅಶ್ಲೀಲ ಅಥವಾ ಅಸಭ್ಯ ಪ್ರದರ್ಶನ ಎಂದಾಗುತ್ತದೆ.[2] ಇದರಲ್ಲಿ ಪುಸ್ತಕ, ಪತ್ರಿಕೆ, ಬರವಣಿಗೆ, ಕರಪತ್ರ, ಛಾಯಾಚಿತ್ರಗಳನ್ನು ತಯಾರಿಸುವುದು, ಹಂಚುವುದು, ಮಾರುವುದು, ವಿತರಿಸುವುದು ಹೀಗೆ ಯಾವುದೇ ಬಗೆಯಲ್ಲಿ ಇದ್ದರೂ ಸಹಾ ಅಪರಾಧವಾಗುತ್ತದೆ.



---

1 ಮಹಿಳೆಯನ್ನು ಅಸಭ್ಯವಾಗಿ ಪ್ರದರ್ಶಿಸುವ (ನಿಷೇಧ) ಕಾನೂನು 1986 - ಕಲಂ 3 ಮತ್ತು 4

2 ಮಹಿಳೆಯ ಅಶ್ಲೀಲ ಪ್ರದರ್ಶಿನ (ನಿಷೇಧ) ಕಾನೂನು 1986 - ಕಲಂ 2

# 15. ಜೀವನಾಂಶ




ಜೀವನಾಂಶ ಎಂದರೆ ಒಬ್ಬರ ಜೀವನ ನಿರ್ವಹಣೆಗೆ ಅಥವಾ
43 ಬದುಕಲು ಹೊಟ್ಟೆಬಟ್ಟೆಗಾಗಿ ಸಂಬಂಧವಿರುವವರಿಗೆ ವೆಚ್ಚಕೊಡುವುದು ಎಂದರ್ಥ. ಒಬ್ಬ ವಯಸ್ಸು, ಅವಲಂಬನೆ, ಅಸಹಾಯಕತೆಯಿಂದ ಆತನ/ಳ ಜೀವನ ಸಾಗುವಿಕೆ ಕಷ್ಟವಾದಾಗ ಆತನಿಗೆ/ಆಕೆಗೆ ಸಂಬಂಧಿಸಿದ ಸಮರ್ಥ ವ್ಯಕ್ತಿಯಿಂದ ಜೀವನಾಂಶ ಕೊಡಿಸಲು ಕಾನೂನು ಇದೆ.

ಹೆಂಡತಿ, ಮಕ್ಕಳು ಮತ್ತು ಹೆತ್ತವರಿಗೆ ಮಾಸಿಕ 500-00 ರೂಪಾಯಿಗಳವರೆಗೆ ಜೀವನ ಭತ್ಯೆ ನೀಡಬೇಕೆಂದು ಇದೆ. ಇಲ್ಲಿ ಹಾಗೆ ಜೀವನಾಂಶ ಕೇಳುವವರು ತಮ್ಮನ್ನು ತಾವು ಪೋಷಿಸಿಕೊಳ್ಳಲು ಅಸಮರ್ಥರಾಗಿರಬೇಕು. ಮತ್ತು ಜೀವನಾಂಶ ನೀಡಬೇಕೆನ್ನುವ ವ್ಯಕ್ತಿಗೆ

ನೀಡುವ ಸಾಮರ್ಥ್ಯ ಇರಬೇಕು. ಹಾಗೆಯೇ ಆತನು ಜೀವನಾಂಶ ಕೇಳುವವರನ್ನ ಪೋಷಿಸಲು ನಿರ್ಲಕ್ಷಿಸಿರಬೇಕು.[1]

ಇಲ್ಲಿ ವಿವಾಹಿತ ಮಡದಿ ಜೀವನಾಂಶ ಕೇಳಬಹುದು. ಮಕ್ಕಳು ಎಂದರೆ ಕಾನೂನು ಸಮ್ಮತ ಅಥವಾ ಕಾನೂನುಬಾಹಿರ ಮಕ್ಕಳು ಆಗಬಹುದು. ಗಂಡು ಮಕ್ಕಳಾದರೆ ವಯಸ್ಕನಾಗುವವರೆಗೆ ಅಥವಾ ವಯಸ್ಕ ಮಗುವು ಮಾನಸಿಕ ಅಥವಾ ದೈಹಿಕ ಅಸಮತೋಲನಕ್ಕೆ ಒಳಗಾಗಿದ್ದರೆ, ಹಾಗೂ ತಮ್ಮನ್ನು ತಾವು ಪೋಷಿಸಿಕೊಳ್ಳಲು ಅಸಮರ್ಥರಾಗಿದ್ದರೆ ಜೀವನಾಂಶವನ್ನು ಕೇಳಬಹುದು. ಗಂಡನು ಹೆಂಡತಿಯನ್ನು ಬಿಟ್ಟಿದ್ದರೆ, ವಿಚ್ಛೇದನ ನೀಡಿದ್ದರೆ, ಆಕೆಗೆ ಜೀವನಾಂಶ ಪಡೆಯುವ ಹಕ್ಕು ಇರುತ್ತದೆ. ಇದು ಎಲ್ಲ ಧರ್ಮದವರಿಗೂ ಅನ್ವಯಿಸುತ್ತದೆ.

ಹೆಂಡತಿಯು ಗಂಡನಿಂದ ಬೇರೆ ಇದ್ದು, ಜೀವನಾಂಶ ಪಡೆಯಲು ಕಾರಣಗಳೆಂದರೆ –



1) ಗಂಡನು ಹೆಂಡತಿಯನ್ನು ಬಿಟ್ಟಿದ್ದರೆ ಅಥವಾ ಉದ್ದೇಶಪೂರ್ವಕವಾಗಿ ನಿರ್ಲಕ್ಷಿಸಿದ್ದರೆ,

2) ಗಂಡನ ಕ್ರೂರ ನಡವಳಿಕೆಯಿಂದ ಹೆಂಡತಿಗೆ ಪ್ರಾಣ ಅಥವಾ ಹಾನಿಯ ಭಯವಿದ್ದರೆ,

3) ಗಂಡನಿಗೆ ಉಗ್ರ ಸ್ವರೂಪದ ಕುಷ್ಠರೋಗವಿದ್ದರೆ,

4) ಬೇರೊಂದು ಹೆಣ್ಣನ್ನು ಮದುವೆ ಆಗಿದ್ದರೆ,

5) ಉಪ ಪತ್ನಿ ಇಟ್ಟುಕೊಂಡಿದ್ದರೆ,

6) ಗಂಡನು ಬೇರೆ ಮತಕ್ಕೆ ಬದಲಾಯಿಸಿಕೊಂಡಿದ್ದರೆ,

7) ಇತರೇ ಯಾವುದೇ ನ್ಯಾಯಬದ್ಧ ಕಾರಣಗಳಾಗಿರಬಹುದು.

ಹೆಂಡತಿಯು ಜೀವನಾಂಶ ಪಡಯಬಹುದು.[2]

---

1 ಫೌಜುದಾರಿ ಪ್ರಕ್ರಿಯಾ ಸಂಹಿತೆ ಕಲಂ 125

2 ಕಲಂ 19 - ಹಿಂದೂ ದತ್ತಕ ಮತ್ತು ಜೀವನಾಂಶದ ಕಾನೂನು 1956

ಹಿಂದೂ ವಿಧವೆಯು ತನ್ನ ಗಂಡನ ಮನೆಯವರಿಂದ ತನ್ನನ್ನು ರಕ್ಷಿಸಿಕೊಳ್ಳುವ ಹಕ್ಕು ಹೊಂದಿದ್ದಾಳೆ. ತನ್ನ ಗಂಡನ ಸ್ವತ್ತಿಗೆ ಹಕ್ಕು ಪಡೆಯುತ್ತಾಳೆ. ಅಂದರೆ ವಿಧವಾ ಸೊಸೆಯು ತನ್ನ ಮಾವನಿಂದ ಜೀವನಾಂಶ ಕೇಳಬಹುದಾಗಿದೆ.[1] ಇಲ್ಲಿ ಜೀವನಾಂಶದ ಮೊತ್ತವು ನ್ಯಾಯಾಲಯದ ವಿವೇಚನಾಧಿಕಾರಕ್ಕೆ ಸೇರಿದ್ದು. ಅಂದರೆ ಇಂತಿಷ್ಟೆ ಹಣ ನೀಡಬೇಕೆಂದು ನಿಯಮವಿಲ್ಲ.[2] ನ್ಯಾಯಾಲಯವು ಜೀವನಾಂಶ ಕೇಳುವವನ ಮತ್ತು ನೀಡಬೇಕಾದವನ ಹಣಕಾಸಿನ ಅಂತಸ್ತು, ಸೂಕ್ತ ಹಾಗೂ ನ್ಯಾಯಬದ್ಧ ಬೇಡಿಕೆ, ಜೀವನಾಂಶಕ್ಕೆ ಅರ್ಹರ ಸಂಖ್ಯೆ ಇತ್ಯಾದಿಗಳನ್ನು ಪರಿಗಣಿಸಲಾಗುವುದು.

ಹಾಗೆಯೇ ಹಿಂದೂ ವಿವಾಹಕ್ಕೆ ಸಂಬಂಧಿಸಿದಂತೆ ಯಾವುದಾದರೂ ನಡವಳಿಕೆ ನ್ಯಾಯಾಲಯದಲ್ಲಿ ನಡೆಯುತ್ತಿದ್ದಾಗ ಹೆಂಡತಿ ಅಥವಾ ಗಂಡನಿಗೆ ಅಂತಹ ನ್ಯಾಯಾಲಯದ ಕೇಸನ್ನು ನಡೆಸುವುದು ದುಸ್ಸಾಧ್ಯವಾದರೆ ಆಗಲೂ ಸಹ ಜೀವನಾಂಶ ಕೇಳಬಹುದು.[3] ಇಲ್ಲ ಅಂತಹ ಕೇಸುಗಳ ಖರ್ಚು ವೆಚ್ಚವನ್ನು ಮಾಸಿಕ ಪರಿಹಾರವಾಗಿ ಈ ನಡವಳಿಕೆ ಮುಗಿಯುವವರೆಗೂ ನ್ಯಾಯಾಲಯವು ನೀಡುವಂತೆ ಆದೇಶಿಸಬಹುದು. ಇಲ್ಲ ಅರ್ಜಿದಾರನ ಸ್ವಂತ ಆದಾಯ ಇತ್ಯಾದಿಗಳನ್ನು ಪರಿಗಣಿಸಲಾಗುವುದು.



1 ಕಲಂ 23 - ಹಿಂದೂ ದತ್ತಕ ಮತ್ತು ಜೀವನಾಂಶದ ಕಾನೂನು 1956

2 ಕಲಂ 24 - ಹಿಂದೂ ಕಾನೂನು

# 16. ಮುಸ್ಲಿಂ ಮಹಿಳೆ

ನಮ್ಮ ರಾಜಕೀಯ ನಾಯಕರ ಓಟಿನ ಹಂಬಲಗಳು, ಮಾನವೀಯತೆಯನ್ನು ಹಾಗೂ ಮಾನವ ಧರ್ಮದ ಹಿನ್ನೆಲೆಯಲ್ಲಿ ಸಹಜ ನ್ಯಾಯದ ದೃಷ್ಟಿಯಿಂದ ರೂಪಿಸಲಾದ ಕಾನೂನುಗಳನ್ನು ಸಹ ತುಳಿದು ಹಾಕಬಲ್ಲವು ಎಂಬುದು ನಮ್ಮೆಲ್ಲರ ಅನುಭವಕ್ಕೆ ಬಂದ ವಿಷಯವೇ.

ನಮ್ಮಲ್ಲಿ ಮುಸ್ಲಿಂ ಮಹಿಳೆಯ ಸ್ಥಿತಿ ಬೇರೆ ಮಹಿಳೆಯರಿಗಿಂತಾ ಚಿಂತಾಜನಕವಾಗಿದೆ. ಮುಸ್ಲಿಂ ಮಹಿಳೆ ವಿವಾಹಿತಳಾಗಿದ್ದು ತನ್ನ ಗಂಡ ಹೆಚ್ಚು ಜನ ಹೆಂಡಂದಿರನ್ನು ಮದುವೆ ಆದಲ್ಲಿ ಆತನೊಡನೆ ಜೀವನ ನಡೆಸಲು ನಿರಾಕರಿಸಬಹುದು.[1] ಹಾಗೆಯೇ ಅವಳು ಗಂಡನಿಂದ ನಿರ್ಲಕ್ಷಿಸಿದ್ದರೆ ಜೀವನಾಂಶಕ್ಕೆ ಅರ್ಜಿ ನೀಡಬಹುದು. ಮತ್ತು ಜೀವನಾಂಶ ಪಡೆಯಬಹುದು.



ಮುಸ್ಲಿಂ ಮಹಿಳೆ ವಿಚ್ಛೇದನ ಪಡೆದಿದ್ದರೆ, ವಿಚ್ಛೇದನ ಕಾಲಕ್ಕೆ ಸೂಕ್ತವಾದ ಜೀವನಾಂಶವನ್ನು "ಇದ್ದತ್" ಅವಧಿಗೆ ತನ್ನ ಗಂಡನಿಂದ ಪಡೆಯಲು ಹಕ್ಕು ಇದೆ. ಹಾಗೆಯೇ ಅಂತಹಾ ವಿಚ್ಛೇದನ ಕಾಲಕ್ಕೆ ಮೊದಲು ಅಥವಾ ನಂತರ ಹುಟ್ಟಿದ ಮಕ್ಕಳಿಗೆ ಅವುಗಳು ಜನಿಸಿದ 2 ವರ್ಷಗಳ ವರೆಗೆ ಆ ಮಕ್ಕಳ ಜೀವನ ನಿರ್ವಹಣೆಗೆ ಸೂಕ್ತ ವ್ಯವಸ್ಥೆ ಮತ್ತು ಜೀವನಾಂಶ ಪಡೆಯಲು ಹಕ್ಕು ಇದೆ. ಜೊತೆಗೆ ಮದುವೆ ಕಾಲಕ್ಕೆ ನಿಷ್ಕರ್ಷ ಆದ 'ಮೆಹರ್' ಅಥವಾ 'ಡೊವರ' ಗೆ ಸಮನಾದ ಮೊತ್ತವನ್ನು ಮತ್ತು ಮದುವೆ ಕಾಲಕ್ಕೆ ಅಥವಾ ತದನಂತರ ಆಕೆಗೆ ನೀಡಿದ್ದ ಎಲ್ಲಾ ಆಸ್ತಿ (ಉಡುಗೊರೆ, ಆಭರಣ, ಇತ್ಯಾದಿ)ಯನ್ನು ಮರಳಿ ಪಡೆಯಲು ಹಕ್ಕು ಇದೆ.[3]

---

1 ಎ.ಐ.ಆರ್ 1985 (2) ಎಸ್.ಸಿ.ಸಿ. 370

3 ಮುಸ್ಲಿಂ ಮಹಿಳೆ (ವಿಚ್ಛೇದಿತ ಹಕ್ಕುಗಳ ರಕ್ಷಣೆ) ಅಧಿನಿಯಮ 1986 ಕಲಂ 4

ಇಲ್ಲಿ ಆಕೆಗೆ ಆಕೆಯ ಹೆತ್ತವರು, ಬಂಧುಗಳು, ಗಂಡ ಅಥವಾ ಗಂಡನ ಬಂಧುಗಳು, ಸ್ನೇಹಿತರು ಹೀಗೆ ಯಾರಿಂದಲೂ ಅಂತಹ ಆಸ್ತಿ ಬಂದಿರಬಹುದು. ಹೀಗೆ ಮೇಲೆ ಹೇಳಿದ ಹಣ ಮತ್ತು ಆಸ್ತಿಯನ್ನು ಗಂಡ ಕೊಡಲು ತಪ್ಪಿದ್ದಲ್ಲಿ ಸದರೀ ವಿಚ್ಛೇದಿತ ಮಹಿಳೆ ಅಥವಾ ಆಕೆಯ ಪರವಾಗಿ ಯಾರಾದರೂ ಮ್ಯಾಜಿಸ್ಟ್ರೇಟರ ನ್ಯಾಯಾಲಯದಲ್ಲಿ ಅರ್ಜಿ ಹಾಕಿ ಅವುಗಳನ್ನು ಪಡೆಯಬಹುದು. ಇಲ್ಲಿ 'ಇದ್ದತ್' ಅವಧಿಗೆ ಇಂತಿಷ್ಟೇ ಹಣವನ್ನು ಜೀವನಾಂಶವನ್ನಾಗಿ ನೀಡಬೇಕೆಂಬ ನಿಯಮವಿಲ್ಲ. ನ್ಯಾಯಾಲಯಕ್ಕೆ ಸರಿ ಕಂಡಂತೆ ಆಕೆ ವೈವಾಹಿಕ ಜೀವನದಲ್ಲಿ ಅನುಭವಿಸಿದ ಸವಲತ್ತುಗಳನ್ನು ಅನುಸರಿಸಿ ಇಲ್ಲಿ ಮಕ್ಕಳಿಗೆ 2 ವರ್ಷ ತುಂಬುವವರೆಗೆ ಜೀವನಾಂಶವನ್ನು ತಂದೆ ನೀಡಬೇಕೆಂದು ಹೇಳಿದ್ದು ಹೆಂಡತಿಯ 'ಇದ್ದತ್' ಅವಧಿಯ ಜೀವನಾಂಶದ ಜೊತೆಗೆ ಮಕ್ಕಳ ಪೋಷಣೆಗೆ ತಡೆಯಬಹುದಾದ ಹೆಚ್ಚಿನ ಹಕ್ಕು ಇದು. ಸದರಿ ಮೈನರ್ ಮಕ್ಕಳಿಗೆ ತಂದೆಯಿಂದ ತಾವು ವಯಸ್ಕರಾಗುವವರೆಗೆ ಜೀವನಾಂಶ ಪಡೆಯುವ ಹಕ್ಕಿಗೆ ಯಾವುದೇ
47 ಭಾದಕವಿಲ್ಲ.

ಹಾಗೆಯೇ ವಿಚ್ಛೇದನ ನೀಡಿದ ಗಂಡನು ತನ್ನ ಹೆಂಡತಿಗೆ ಸೇರಿದ ಆಸ್ತಿ, (ಒಡವೆ, ಹಣ ಇತ್ಯಾದಿಯನ್ನು) ದುರಪಯೋಗ ಮಾಡಿಕೊಂಡಿದ್ದರೆ ಅಥವಾ ಬಳಸಿಕೊಂಡಿದ್ದರೆ ಆತನ ವಿರುದ್ಧ ಕ್ರಿಮಿನಲ್ ಕೇಸನ್ನು ಕೂಡಾ ಬಳಸಬಹುದು.[1] ಇನ್ನೂ ವಿಚ್ಛೇದಿತ ಮಹಿಳೆಯು ತನ್ನ ಜೀವನ ನಿರ್ವಹಣೆಗೆ ಇದ್ದ ಅವಧಿಯ ನಂತರ ಪುನಃ ಮದುವೆಯಾಗದೆ ಉಳಿದಿದ್ದರೆ, ನ್ಯಾಯಾಲಯದಿಂದ ಜೀವನಾಂಶಕ್ಕಾಗಿ ಆದೇಶ ಪಡೆಯಬಹುದು. ಇಲ್ಲಿ ಮೊದಲು ಆಕೆಗೆ ಮಕ್ಕಳಿದ್ದರೆ ಈ ಜೀವನಾಂಶಕ್ಕಾಗಿ ಆಕೆಯ ಮಕ್ಕಳನ್ನೂ ಒಂದು ವೇಳೆ ಮಕ್ಕಳು ಆಕೆಯನ್ನೂ ಪೋಷಿಸಲು ಅಸಮರ್ಥರಾಗಿದ್ದರೆ ಆಕೆಯ ಹೆತ್ತವರಿಂದಲೂ ಒಂದು ವೇಳೆ ಅವರು ಅಸಮರ್ಥರಾಗಿದ್ದರೆ ಆಕೆಯ ಬಂಧುಗಳಿಂದ ಜೀವಾನಂಶವನ್ನೂ ಕೇಳಬಹುದಾಗಿದೆ. ಇಲ್ಲಿ ಬಂಧುಗಳೆಂದರೆ ಒಂದು ವೇಳೆ ಆಕೆಗೆ ಆಸ್ತಿ ಇದ್ದು ಸತ್ತ ಪಕ್ಷದಲ್ಲಿ

---

1 ಕ್ರಿಮಿನಲ್ ಪ್ರೊಸೀಜರ್ ಕೋಡ್ 1973 ಕಲಂ 125 (3)

ಅಂತಹ ಆಸ್ತಿಯನ್ನು ಪಡೆಯಲು ಎಷ್ಟರ ಮಟ್ಟಿನ ಹಕ್ಕನ್ನು ಹೊಂದಿರುತ್ತಾರೋ ಅಷ್ಟರ ಮಟ್ಟಿನ ಹೊಣೆಗಾರಿಕೆಯನ್ನು ಜೀವನಾಂಶ ನೀಡಲು ಹೊಂದಿರುತ್ತಾರೋ ಅಷ್ಟರ ಮಟ್ಟಿನ ಹೊಣೆಗಾರಿಕೆಯನ್ನು ಜೀವನಾಂಶ ನೀಡಲು ಹೊಂದಿರುತ್ತಾರೆ. ಒಂದು ವೇಳೆ ಆಕೆಗೆ ಯಾವುದೇ ಬಂಧುಗಳಿಲ್ಲದಿದ್ದರೆ ಅಥವಾ ಬಂಧುಗಳು ಇದ್ದೂ ಸಹ ಆಕೆಯನ್ನು ಪೋಷಿಸಲು ಅಸಮರ್ಪಕರಾದರೆ ಕೊನೆಯದಾಗಿ ಆ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿರುವ ರಾಜ್ಯ ವರ್ಕ್ಫ್ ಬೋರ್ಡ್ ಆಕೆಗೆ ಜೀವಾನಾಂಶ ನೀಡಬೇಕು.[2]

ಅಂತೂ ಕೊಂಕಣ ಸುತ್ತಿ ಮೈಲಾರಕ್ಕೆ ಬರುವಂತಹ ಪರಿಸ್ಥಿತಿಯಲ್ಲಿ ಮುಸ್ಲಿಂ ಮಹಿಳೆಯದ್ದಾಗಿದೆ.

ಒಂದು ವೇಳೆ ವಿಚ್ಛೇದಿತ ಮುಸ್ಲಿಂ ಮಹಿಳೆ ಹಾಗೂ ಆಕೆಯ ಗಂಡ ಇಬ್ಬರೂ ಸಹ ಸಾಮಾನ್ಯ ಕಾನೂನಿನ ಅಡಿಯಲ್ಲಿ ತಮ್ಮನ್ನು ಗುರುತಿಸಿಕೊಳ್ಳುವುದಾಗಿ ಘೋಷಿಸಿಕೊಂಡರೆ ಅವರಿಗೆ ನಮ್ಮ ಭಾರತದ ಕ್ರಿಮಿನಲ್ ಪ್ರೋಸೀಜರ್ ಕೋಡ ಅನ್ವಯವಾಗುತ್ತದೆ.



-0-

---

2 ಮುಸ್ಲಿಂ ಮಹಿಲೆಯರ (ವಿಚ್ಛೇದನ ಹಕ್ಕುಗಳ ರಕ್ಷಣೆ) ಅಧಿನಿಯಮ 1986 ಕಲಂ 3

# 17. ಆಸ್ತಿಯ ಹಕ್ಕು






ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಎಂದು ಆಯಾ ಧರ್ಮದ ಮಹಿಳೆಯರಿಗೆ ಪ್ರತ್ಯೇಕವಾಗಿ ಆಸ್ತಿಯಲ್ಲಿ ಎಷ್ಟು ಭಾಗ ಸಿಗುತ್ತದೆ ಎಂಬುದು ಆಯಾ ಧರ್ಮಗಳ ವೈಯುಕ್ತಿಕ ಕಾನೂನಿನಲ್ಲಿ ಹೇಳಿದೆ.

ಅದರಂತೆ ಹಿಂದೂ ಮಹಿಳೆಗೆ ತನ್ನ ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ, ಒಂದು ವೇಳೆ ತಂದೆ ಅದನ್ನು ವಿಲೇವಾರಿ ಮಾಡದೇ ಅಥವಾ ವಿಲ್ ಬರೆಯದೇ ಮೃತನಾಗಿದ್ದರೆ, ಇತರೇ ಗಂಡು ಮಕ್ಕಳಿಗೆ ಸಿಗುವಂತೆ ಸಮಾನ ಪಾಲು ಸಿಗುತ್ತದೆ.

ಹಾಗೆಯೇ ಇತ್ತೀಚೆಗೆ ನಮ್ಮ ಸರಕಾರ ತೆಗೆದುಕೊಂಡ ಮಹತ್ವದ ನಿರ್ಣಯದಂತೆ ಪ್ರತಿಯೊಬ್ಬ ಹಿಂದೂ ಮಹಿಳೆಗೂ ತನ್ನ ಪಿತ್ರಾರ್ಜಿತ ಆಸ್ತಿಯಲ್ಲಿಯೂ ಸಮಪಾಲು ಸಿಗುತ್ತದೆ. ಇಲ್ಲಿ ವಿಲ್ ಬರೆಯದೇ ಗಂಡನು ತೀರಿಕೊಂಡಿದ್ದರೆ ಆತನ ವಿಧವೆಗೆ, ತಾಯಿಗೆ ಸಹ ಮಕ್ಕಳ ಜೊತೆಯಲ್ಲಿ ಸಮಪಾಲು ಸಿಗುತ್ತದೆ.[2]

ಹೀಗೆ ಆಸ್ತಿ ಪಡೆಯುವ ಆ ಮಹಿಳೆ ಪಡೆಯುವ ಆಸ್ತಿಗೆ ಸಂಪೂರ್ಣ ಒಡೆಯಳಾಗುತ್ತಾಳೆ.[3] ಮತ್ತು ಇಲ್ಲಿ ಆ ಮಹಿಳೆಗೆ ತನ್ನ ಪಾಲಿನ ಆಸ್ತಿಯನ್ನು ಹಿಸ್ಸಾ ಕಾಲಕ್ಕಿಂತಲೂ ಮೊದಲೇ ಕೇಳಿಪಡೆಯುವ ಹಕ್ಕು ಇರುತ್ತದೆ. ಆದರೆ ಇದು ತಂದೆಯ ಸ್ವಯಾರ್ಜಿತ ಆಸ್ತಿಗೆ ಅನ್ವಯಿಸುವುದಿಲ್ಲ. ಹಾಗೇ ತನ್ನ ಪಾಲಿಗೆ ಬಂದ ಆಸ್ತಿಯು ಆಕೆಯ ಸ್ವಾಧೀನದಲ್ಲಿರದಿದ್ದರೆ, ಅದನ್ನು ಮರಳಿ ಪಡೆಯುವ ಹಕ್ಕು ಇದೆ. ಅವಳು ತನ್ನ ಪಾಲಿಗೆ ಬಂದ ಆಸ್ತಿಯನ್ನು ತನ್ನ ಅಗತ್ಯಕ್ಕೆ ತಕ್ಕಂತೆ ಉಪಯೋಗಿಸುವ ವಿಲೇವಾರಿ ಮಾಡುವ ಸಂಪೂರ್ಣ ಹಕ್ಕು ಇರುತ್ತದೆ.

ಈ ಹಿಂದೂ ವಾರಸಾ ಕಾನೂನು ಹಿಂದುಗಳ ಮತ್ತು ಹಿಂದೂ

ಧರ್ಮದ ಅನುಯಾಯಿಗಳಾದ ವೀರಶೈವ, ಲಿಂಗಾಯಿತ, ಬ್ರಹ್ಮೋ, ಪ್ರಾರ್ಥನಾ ಮತ್ತು ಆರ್ಯ ಸಮಾಜದವರಿಗೂ ಹಾಗೂ ಬೌದ್ಧರು, ಸಿಖ್ ಧರ್ಮದವರಿಗೂ ಅನ್ವಯಿಸುತ್ತದೆ.

ಆದರೆ ಹಾಲೀ ಇರುವ ಹಕ್ಕು ಎಂದರೆ ಮಗಳಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸ್ವಯಂ ಆಗಿ ಹಿಸ್ಸೆ ಕೇಳುವ ಹಕ್ಕಿಲ್ಲದಿದ್ದರೂ, ಹಿಸ್ಸಾ ಕಾಲಕ್ಕೆ ತನ್ನ ತಂದೆಗೆ ಸಿಗುವ ಪಾಲಿನಲ್ಲಿ ಇತರೆ ಮಕ್ಕಳೊಡನೆ ಒಂದು ಸಮಪಾಲು ಪಡೆಯುವ ಹಕ್ಕಿದೆ. ಮಿತಾಕ್ಷರ ಸಂಪ್ರದಾಯದ ಪ್ರಕಾರ ಅನ್ವಯಿಸುವ ಕುಟುಂಬದ ಆಸ್ತಿಯು ವಿಲ್ ಬರೆದ ಅಥವಾ ವಿಲ್ ಬರೆಯದೇ ಇರುವ ಯಾವ ಸನ್ನಿವೇಶ ಇದ್ದರೂ ಹಿಂದೂ ವಾರಸು ಅಧಿನಿಯಮದನ್ವಯ ಆಸ್ತಿ ಹಮಚಿಕೆ ಆಗುತ್ತದೆಯೇ

---

2 ಹಿಂದೂ ವಾರಸಾ ಕಾನೂನು 1956 - ಕಲಂ 6

3 ಹಿಂದೂ ವಾರಸಾ ಕಾನೂನು 1956 - ಕಲಂ 14

ಹೊರತು ಬದುಕಿ ಉಳಿಯುವ ನಿಯಮದಿಂದ (ಸರ್‌ವೈವಲ್‌ಶಿಪ್) ಹಕ್ಕು ಸಿಗುವುದಿಲ್ಲ.

ಉದಾಹರಣೆಗೆ 'ಅ' ಎನ್ನುವವ 'ಬ' ಮತ್ತು 'ಕ' ಎಂಬ ಸಹೋದರರನ್ನು ಮತ್ತು 'ಅವಿ' ಎಂಬ ತನ್ನ ವಿಧವಾ ಪತ್ನಿಯನ್ನು ಬಿಟ್ಟು ಸತ್ತು ಹೋಗಿದ್ದರೆ ಇಲ್ಲಿ 'ಅ' ಎನ್ನುವವನ ಪ್ರಿತ್ರಾರ್ಜಿತ ಆಸ್ತಿಯಲ್ಲಿನ ಸಂಪೂರ್ಣ ಹಕ್ಕು 'ಅವಿ' ಅಂದರೆ ಆತನ ವಿಧವೆಗೆ ಸೇರುತ್ತದೆಯೇ ಹೊರತು 'ಬ' ಮತ್ತು 'ಕ' ಎಂಬ ಆತನ ಸಹೋದರರಿಗಲ್ಲ.

ಹಾಗೆಯೇ ಹಿಂದೂ ಮಹಿಳೆಯ ಸ್ವಾಧೀನ ಇರುವ ಎಲ್ಲಾ ಚರ ಮತ್ತು ಸ್ಥಿರ ಅಸ್ತಿಗೆ ಅವಳು ಸಂಪೂರ್ಣ ಒಡೆಯಳಾಗುತ್ತಾಳೆ. ಈ ಆಸ್ತಿ ವಾರಸುದಾರಿಕೆಯಿಂದ ಪಡೆದದ್ದಾಗಲೀ, ಪಾಲುಗಾರಿಕೆಯಿಂದ ಬಂದದ್ದಾಗಲೀ, ಜೀವನಾಂಶದ ಆಸ್ತಿಯಾಗಲೀ, ದಾನದ ಅಸ್ತಿ ಅವಳು ಗಳಿಸಿದ ಆಸ್ತಿ, ಸ್ತ್ರೀಧನ ಹೀಗೆ ಯಾವ ಮೂಲದಿಂದಲೇ ಅದು ಬಂದಿದ್ದರೂ ಅದಕ್ಕೆ ಅವಳು ಸಂಪೂರ್ಣ
51 ಒಡೆಯಳು. ಆದರೆ ದಾನ, ವಿಲ್ ಮತ್ತು ನ್ಯಾಯಾಲಯದ ತೀರ್ಪು ಇವುಗಳ ಅನ್ವಯ ಅವಳಿಗೆ ಸೀಮಿತ ಹಕ್ಕು ನೀಡಿದ್ದರೆ ಅಗ ಮಾತ್ರ ಮತ್ತು ಅಷ್ಟಕ್ಕೆ ಮಾತ್ರ ಅವಳಿಗೆ ಹಕ್ಕು ಸಿಗುತ್ತದೆ.

# 18. ಉಚಿತ ಕಾನೂನು ನೆರವು





## ಉಚಿತ ಕಾನೂನು ನೆರವು ಎಂದರೇನು?

ಯಾರಿಗೇ ಆಗಲೀ ವಕೀಲರನ್ನು ನೇಮಿಸಿಕೊಳ್ಳುವ ಮತ್ತು ನ್ಯಾಯಾಲಯದ ಫೀಜು ಕೊಡಲು ಸಾಧ್ಯವಿಲ್ಲದವರಿಗೆ ಈ ನೆರವು ದೊರೆಯುತ್ತದೆ. ಜೊತೆಗೆ ಯಾರಿಗೆ ಕೋರ್ಟಿನ ಖರ್ಚು ಭರಿಸುವ ಸಾಮರ್ಥ್ಯ ಇರುವುದಿಲ್ಲವೋ ಅಂತಹವರಿಗೂ ಈ ನೆರವು ದೊರೆಯುತ್ತದೆ. ಅವರು ಪ್ರಾಮಾಣಿಕ ಕಕ್ಷಿದಾರರಾಗಿದ್ದರೆ, ಉಚಿತವಾಗಿ ಕಾನೂನು ನೆರವು ನಡೆಯುವ ಹಕ್ಕನ್ನು ಹೊಂದುತ್ತಾರೆ. ಇಲ್ಲಿ ಸರ್ಕಾರದ ವತಿಯಿಂದ ವಕೀಲರನ್ನು ನೇಮಿಸಲಾಗುವುದು. ವಕೀಲರ ಫೀಜು, ನ್ಯಾಯಾಲಯದ ಶುಲ್ಕವನ್ನು ಕಕ್ಷಿಗಾರರ ಪರವಾಗಿ ಸರ್ಕಾರವೇ ಭರಿಸುವುದು. ಇದಕ್ಕೆ ಉಚಿತ ಕಾನೂನು ನೆರವು ಎಂದು ಕರೆಯುತ್ತಾರೆ. ಇದನ್ನು ನಮ್ಮ ಸಂವಿಧಾನದಲ್ಲಿ ಸೇರಿಸಿದೆ.[1]

---

1 ಭಾರತೀಯ ಸಂವಿಧಾನ ವಿಧಿ 39-ಎ

ಎಲ್ಲರಿಗೂ ಈ ನೆರವು ಸಿಗುತ್ತದೆಯೆ?

ಇದು ಕೆಲವರಿಗೆ ಮಾತ್ರ ಸಿಗುತ್ತದೆ. ಯಾರು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿದ್ದಾರೆಯೋ ಅಂತಹವರಿಗೆ ಮಾತ್ರ. ಇದಕ್ಕೆ ಕೆಲವು ನಿಬಂಧನೆಗಳಿವೆ.

1. ವಾರ್ಷಿಕ ಆದಾಯ 8 ಸಾವಿರ ರೂಪಾಯಿಗಳಿಗೆ ಕಡಿಮೆ ಇರಬೇಕು. ಅಥವಾ
2. ಮಹಿಳೆಯರು, ಕಾರ್ಮಿಕರು, ರೈತ ಕಾರ್ಮಿಕರು, ಪರಿಶಿಷ್ಟ ಜನಾಂಗದವರಾಗಿರಬೇಕು. ಸೈನ್ಯದಲ್ಲಿರುವವರು ಅಥವಾ ಅಲ್ಲಿಂದ ನಿವೃತ್ತಿ ಹೊಂದಿದವರಿಗೂ ಯಾವುದೇ ಕುಟುಂಬದ ಆರ್ಥಿಕ ಆದಾಯದ ಮಿತಿ ಇಲ್ಲದೇ ಇವರಿಗೆ ಈ ನೆರವು ಸಿಗುತ್ತದೆ.

## ಉಚಿತ ಕಾನೂನು ನೆರವು ಪಡೆಯುವುದು ಹೇಗೆ?

ಪ್ರತಿ ತಾಲ್ಲೂಕಿನಲ್ಲಿ ಇರುವ ಅಥವಾ ಆಯಾ ಪ್ರದೇಶದಲ್ಲಿನ
53 ನ್ಯಾಯಾಲಯದಲ್ಲಿ ಸಾಮಾನ್ಯವಾಗಿ ಒಂದು ಉಚಿತ ಕಾನೂನು ನೆರವು ಸಮಿತಿ ಇರುತ್ತದೆ. ಇದರಲ್ಲಿ ಸರ್ಕಾರೀ ವಕೀಲರು ಈ ಸಮಿತಿಯ ಕಾರ್ಯದರ್ಶಿಗಳು ಆಗಿರುತ್ತಾರೆ. ನ್ಯಾಯಾಲಯದ ಆವರಣದಲ್ಲಿಯೇ ಇವರ ಕಛೇರಿ ಇರುತ್ತದೆ. ಸದರೀ ಕಾರ್ಯದರ್ಶಿಯವರನ್ನು ಭೇಟಿ ಮಾಡಿ ಸಮಸ್ಯೆಯನ್ನು ವಿವರಿಸಿ, ಅಲ್ಲಿಯೇ ದೊರೆಯುವ ನಮೂನೆ ಅಥವಾ ಫಾರಂನ್ನು ತುಂಬಿಕೊಡಬೇಕು. ಸದರಿ ಕಾರ್ಯದರ್ಶಿ ಆ ಕಕ್ಷಿಗಾರರ ನಮೂನೆಯನ್ನು ಗಂಭೀರವಾಗಿ ಪರಿಗಣಿಸುವರು. ನಂತರ ಸೂಕ್ತ ವಕೀಲರನ್ನು ನೇಮಿಸುವ ಮುಂದಿನ ಅಗತ್ಯ ಕ್ರಮಗಳನ್ನು ಕೈಗೊಳ್ಳುತ್ತಾರೆ. ಇಲ್ಲಿ ಒಂದು ಅಂಶ ಮುಖ್ಯ, ಬಡ ಜನತೆಗೆ, ಅಶಕ್ತರಿಗೆ ಸಹಾಯಮಾಡುವ ಉದ್ದೇಶ ಮಾತ್ರ ಇರಬೇಕು. ಉಚಿತ ಕಾನೂನು ನೆರವಿನಲ್ಲಿ ಸುಳ್ಳು ದಾವೆ ಹೂಡುವುದು ಅಪರಾಧವಾಗುತ್ತದೆ. ಸುಳ್ಳು ಹೇಳಿಕೊಂಡು ಬರುವ ಅಥವಾ ಹವ್ಯಾಸೀ ಅಪರಾಧಿಗಳಿಗೆ ಈ ನೆರವು ಸಿಗುವುದಿಲ್ಲ. ನ್ಯಾಯ ಬೇಡಿ ಬರುವವನು, ನ್ಯಾಯವಂತನಾಗಿ ಇರಬೇಕೆಂಬುದು ಇದರ ಮೂಲ.

